# ಚಂದಾದಾರರಾಗ ಬಯಸುವಿರಾ?

'ಇತಿಹಾಸ ದರ್ಪಣ'ದ ಚಂದಾದಾರರಾಗ ಬಯಸುವವರು ನಿಮ್ಮ ಆಯ್ಕೆಯ ಚಂದಾ ಹಣವನ್ನು ಡಿ.ಡಿ / ಚೆಕ್ / ಎಂ.ಓ ಮೂಲಕ ಕೆಳಕಂಡ ವಿಳಾಸಕ್ಕೆ ಕಳುಹಿಸಿ ಕೊಡಬಹುದು.

– ಡಿ.ಡಿ ಕಳುಹಿಸಿಕೊಡುವವರು "EDITOR, ITIHASA DARPANA" ಹೆಸರಿಗೆ ಬೆಂಗಳೂರಿನಲ್ಲಿ ಸಂದಾಯವಾಗುವಂತೆ ಡಿ.ಡಿ.ಯನ್ನು ತೆಗೆಸಿ, ಅದನ್ನು ನಿಮ್ಮ ವಿಳಾಸವುಳ್ಳ ಪತ್ರದೊಂದಿಗೆ ನಮಗೆ ಕಳುಹಿಸಿ ಕೊಡಿ.

– ಚೆಕ್ ಕಳುಹಿಸಿಕೊಡುವವರು ಚೆಕ್ಕನ್ನು "EDITOR, ITIHASA DARPANA" ಹೆಸರಿಗೆ ಬರೆದು, ಚೆಕ್ಕಿನ ಮೇಲ್ಭಾಗದ ಎಡಮೂಲೆಯಲ್ಲಿ "ಅಕೌಂಟ್ ಪೇ" ಎಂದು ನಮೂದಿಸಿ, ನಿಮ್ಮ ವಿಳಾಸದ ಪತ್ರದೊಂದಿಗೆ ಕಳುಹಿಸಿ. ಬೆಂಗಳೂರಿನ ಹೊರಗಡೆಯ **ಚೆಕ್ಕುಗಳಾಗಿದ್ದಲ್ಲಿ ಬ್ಯಾಂಕಿನ ಸೇವಾಶುಲ್ಕ ೩೦/– ರೂ.ಗಳನ್ನು** ಚಂದಾ ಹಣದ ಮೊತ್ತದಲ್ಲಿ ಸೇರಿಸಿ ಕಳುಹಿಸಿ ಕೊಡಬೇಕು.

– ಎಂ.ಓ ಮಾಡುವವರು ನಿಮ್ಮ ವಿಳಾಸವನ್ನು ಎಂ.ಓ ಅರ್ಜಿಯ ಮೇಲ್ಭಾಗದಲ್ಲಿರುವ ಸಂದೇಶ ಎಂಬ ಸ್ಥಳದಲ್ಲಿ ತಪ್ಪದೇ ನಿಮ್ಮ ವಿಳಾಸ ಬರೆಯಿರಿ. ಇ.ಎಂ.ಓ ಮಾಡಿದ್ದಲ್ಲಿ ಎರಡು ದಿನಗಳ ನಂತರ ಕರೆಮಾಡಿ ನಿಮ್ಮ ವಿಳಾಸವನ್ನು ನಮಗೆ ತಿಳಿಸಿ.

– ಇಲ್ಲವಾದಲ್ಲಿ ಬೆಂಗಳೂರಿನ ಚಾಮರಾಜಪೇಟೆಯ ಅಪೆಕ್ಸ್ ಬ್ಯಾಂಕಿನ ಪ್ರಧಾನ ಶಾಖೆಯಲ್ಲಿರುವ "EDITOR, ITIHASA DARPANA" ಹೆಸರಿನ ಚಾಲ್ತಿಖಾತೆ **ಸಂ: 101 882** ಕ್ಕೆ ಚಂದಾಹಣವನ್ನು ನಿಮ್ಮ ಹೆಸರಿನಲ್ಲಿ ಜಮಾ ಮಾಡಿ, ಸ್ವೀಕೃತಿಯ ನಕಲನ್ನು, ನಿಮ್ಮ ವಿಳಾಸದ ಪತ್ರದೊಂದಿಗೆ ನಮಗೆ ಕಳುಹಿಸಿಕೊಡಿ.

## ಚಂದಾ ವಿವರ

| |
|---|
| **ವಾರ್ಷಿಕ ಚಂದಾ** (ಅಂಚೆವೆಚ್ಚ ಸೇರಿ) – ೩೦೦/– ರೂ.ಗಳು. (**ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ – ೪೫೦/–ರೂ.ಗಳು**) |
| **ದ್ವೈವಾರ್ಷಿಕ ಚಂದಾ** (ಅಂಚೆವೆಚ್ಚ ಸೇರಿ) – ೫೦೦/– ರೂ.ಗಳು. (**ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ – ೮೦೦/–ರೂ.ಗಳು**). |
| **ಆಜೀವ ಚಂದಾ** – ೪೦೦೦/– ರೂ.ಗಳು. (**ಶಾಲಾಕಾಲೇಜು ಮತ್ತು ಸಂಘ ಸಂಸ್ಥೆಗಳಿಗೆ – ೬೦೦೦/– ರೂ.ಗಳು**). |

ಚಂದಾ ಕಳುಹಿಸಿಕೊಡಬೇಕಾದ ವಿಳಾಸ:

| | |
|---|---|
| **ಸಂಪಾದಕರು, 'ಇತಿಹಾಸ ದರ್ಪಣ',**<br># ೩೩ ಎ, ಐ.ಟಿ.ಐ ಕಾಲೇಜು ಹತ್ತಿರ,<br>ಕೆಂಪೇಗೌಡನಗರ, ವಿಶ್ವನೀಡಂ – ಅಂಚೆ,<br>ಬೆಂಗಳೂರು–೫೬೦೦೯೧.<br>ಮೊ– ೭೮೨೯೪೦೪೦೬೩. | **The Editor, 'Itihasa Darpana'**<br># 33 A, Near I.T.I College,<br>Kempegowda Nagara,<br>Vishwaneedam-Post,<br>Bengaluru- 560091.<br>Mob- 7829404063 |

ISSN 2321 - 3590

# ಇತಿಹಾಸ  ದರ್ಪಣ

(ತ್ರೈಮಾಸಿಕ)

ಚರಿತ್ರಾಸಕ್ತರ ಅಂಕಣ

ಇತಿಹಾಸ ದರ್ಪಣ
(ತ್ರೈಮಾಸಿಕ)

*Itihasa Darpana*
(Quarterly)

ಪುಸ್ತಕ : ೨೩

**Book : 23**

ಅಕ್ಟೋಬರ್-ಡಿಸೆಂಬರ್ : ೨೦೧೪
**October-December : 2014**

**ಸಂಪಾದಕರು**
ಹಂ.ಗು. ರಾಜೇಶ್
ಸಂ.ದೂ. : ೭೮೨೯೪೦೪೦೬೩

**Editor**
H.G Rajesh
Mob : 7829404063

**ಉಪ ಸಂಪಾದಕರು**
ಸುಂಕಂ ಗೋವರ್ಧನ
ರಶ್ಮಿ ಎಸ್.
ಶಿವಕುಮಾರಿ ಎಂ.ಎಸ್.

**Sub Editors**
Sunkam Govardhan
Rashmi S.
Shivakumari M.S.

**ಅಕ್ಷರ ಜೋಡಣೆ**
ಮಹೇಶ್ ಎಂ.
ಸಂ.ದೂ. : ೯೬೩೨೨೬೫೧೮೧

**DTP**
Mahesh M.
Mob : 9632265181

**ಮುಖಪುಟ ವಿನ್ಯಾಸ**
ಸುರೇಶ್‌ಕುಮಾರ್ ಎಚ್.
ಸಂ.ದೂ. : ೮೯೭೦೬೬೬೮೦೯

**Cover Design**
Sureshkumar H.
Mob : 8970666809

**ಮುದ್ರಕರು**
ಶ್ರೀ ರಂಗನಾಥ ಪ್ರಿಂಟರ್ಸ್
ಸಂ.ದೂ. : ೯೮೪೪೧೫೬೧೯೨

**Printed at**
Sri Ranganatha Printers
Mob : 9844156192

---

*ಓದುಗರ ಸಲಹೆ-ಸೂಚನೆಗಳನ್ನು 'ಇತಿಹಾಸ ದರ್ಪಣ'ವು ಮುಕ್ತವಾಗಿ ಸ್ವಾಗತಿಸುತ್ತದೆ.*

*E-mail : itihasadarpana@gmail.com*

*ಈ ಪತ್ರಿಕೆಯ ಲೇಖನಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಲೇಖಕರ ಅಭಿಪ್ರಾಯಗಳೇ ವಿನಃ ಪತ್ರಿಕೆಯ ಅಭಿಪ್ರಾಯವಲ್ಲ. -ಸಂ.*

---

"THE PUBLICATION OF THIS JOURNAL HAS BEEN FINANCIALLY SUPPORTED BY THE INDIAN COUNCIL OF HISTORICAL RESEARCH. THE RESPONSIBILITY FOR THE FACTS STATED ON OPINIONS EXPRESSED IS ENTIRELY OF THE AUTHOR AND NOT OF THE ICHR."

---

# ಪರಿವಿಡಿ. . .



## ಆಕರ ವಿಭಾಗ



## ಪುಸ್ತಕ ವಿಮರ್ಶೆ



## ಪ್ರತಿಕ್ರಿಯೆ

## ನುಡಿಗನ್ನಡಿ

### ಮರೆಯಾದ ಮಹಾಮೇರುಗಳು

**ಕ**ನ್ನಡ ಸಾಹಿತ್ಯದ ಮೇರು ಪ್ರತಿಭೆ, ಪ್ರಗತಿಪರ ವಿಚಾರವಂತರ ಮೆಚ್ಚಿನ ಮೇಷ್ಟ್ರು, ಮಿಗಿಲಾಗಿ ಕನ್ನಡಿಗರ ಸಾಕ್ಷಿಪ್ರಜ್ಞೆಯಾಗಿದ್ದ ಯು.ಆರ್.ಅನಂತಮೂರ್ತಿ ಅವರು 2014ರ ಆಗಸ್ಟ್ 22ರಂದು ಬೆಂಗಳೂರಿನಲ್ಲಿ ಕೊನೆಯುಸಿರೆಳೆದರು. ಅನಂತಮೂರ್ತಿ ಅವರು ಭೌತಿಕವಾಗಿ ನಮ್ಮನ್ನಗಲಿದ ವಾರದಲ್ಲಿಯೇ (30 ಆಗಸ್ಟ್, 2014) ದೆಹಲಿ ಬಳಿಯ ಗುಡಗಾವ್(ಹರ್‍ಯಾಣ ರಾಜ್ಯ)ನಲ್ಲಿ ಆಧುನಿಕ ಭಾರತದ ಪ್ರಸಿದ್ಧ ಇತಿಹಾಸಕಾರ ಬಿಪನ್ ಚಂದ್ರ ವಿಧಿವಶರಾದರೆಂಬ ಮತ್ತೊಂದು ವಿಷಾದಕರ ಸುದ್ದಿ ಬಂದೆರಗಿತು. ಕೋಮುವಾದ ಮತ್ತು ವಸಾಹತುಶಾಹಿಯ ಆಧುನಿಕ ಭಾರತದ ಚರಿತ್ರೆಯನ್ನು ಅರಿಯುವ ನೂತನ ದೃಷ್ಟಿಕೋನವನ್ನು ಕೊಟ್ಟವರು ಬಿಪನ್ ಚಂದ್ರ. ಹೀಗಾಗಿ ಅನಂತಮೂರ್ತಿ ಮತ್ತು ಬಿಪನ್ ಚಂದ್ರ ಇವರಿಬ್ಬರೂ ಸಾಹಿತ್ಯ ಮತ್ತು ಚರಿತ್ರೆಯ ಕ್ಷೇತ್ರಗಳ ಮಹಾಮೇರುಗಳು ಎಂಬುದರಲ್ಲಿ ಅನುಮಾನವಿಲ್ಲ. ಈ ಇಬ್ಬರು ಮಹನೀಯರ ನಡುವೆ ಹಲವು ಸಾಮ್ಯತೆಗಳಿವೆ.

ಅನಂತಮೂರ್ತಿ ಅವರು ದಕ್ಷಿಣ ಭಾರತದವರು, ಬಿಪನ್ ಉತ್ತರ ಭಾರತದವರು ಎಂಬುದನ್ನು ಬಿಟ್ಟರೆ, ಇವರಿಬ್ಬರ ನಡುವೆ ಹಲವು ವಿಚಾರಗಳಲ್ಲಿ ಸಾಮ್ಯತೆಗಳನ್ನು ಗುರುತಿಸಬಹುದು. ಅನಂತಮೂರ್ತಿ ಅವರು ಸಮಾಜವಾದದಿಂದ ಪ್ರಭಾವಿತರಾದರೆ, ಬಿಪನ್ ಸಮತಾವಾದದಿಂದ ಪ್ರಭಾವಿತರಾದರು. ಇಬ್ಬರೂ ವಿದೇಶಗಳಲ್ಲಿಯೇ ಡಾಕ್ಟರೇಟ್ ಪದವಿ ಪಡೆದವರು. ಇಬ್ಬರೂ ಹೋರಾಟ, ಚಳವಳಿಗಳ ಹಿನ್ನೆಲೆಯಿಂದಲೇ ಬಂದವರು. ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮೂಲಭೂತವಾದ, ಕೋಮುವಾದಗಳನ್ನು ವಿರೋಧಿಸುತ್ತಲೇ ಬಂದವರು. ಜಾತ್ಯತೀತ ತತ್ವದ ಬಗೆಗೆ ಉದಾರ ನಿಲುವು ತಳೆದವರು. ಇಬ್ಬರೂ ಕೂಡ ಗಾಂಧೀಜಿಯವರ ವಿಚಾರಧಾರೆಗಳನ್ನು ಗಹನವಾಗಿ ಓದಿಕೊಂಡವರು. ಅನಂತಮೂರ್ತಿ ಅವರು ನೆಹರೂ ಅವರ ಚಿಂತನೆಗಳನ್ನು ಮೆಚ್ಚಿದಂತೆ ಬಿಪಿನ್ ಅವರೂ ಕೂಡ ನೆಹರೂ ಬಗೆಗೆ ಮೆಚ್ಚಿಗೆ ಹೊಂದಿದ್ದವರು. ಆದರೆ ಇಂದಿರಾ ಗಾಂಧಿ ತುರ್ತುಪರಿಸ್ಥಿತಿ ಘೋಷಿಸಿದಾಗ ಅನಂತಮೂರ್ತಿ ಅವರು ಇಂದಿರಾ ಗಾಂಧಿಯವರನ್ನು ತೀವ್ರವಾಗಿ ಪ್ರತಿಭಟಿಸಿದರು. ತುರ್ತುಪರಿಸ್ಥಿತಿ ನಂತರ ನಡೆದ ಚುನಾವಣೆಯಲ್ಲಿ ಸೋತ ಇಂದಿರಾ ಗಾಂಧಿ, ಕರ್ನಾಟಕದ ಚಿಕ್ಕಮಗಳೂರಿನಿಂದ ಮರು ಆಯ್ಕೆ ಬಯಸಿ ಚುನಾವಣೆಗೆ ನಿಂತಾಗ ಅನಂತಮೂರ್ತಿ ಅವರು ಅವರ ವಿರುದ್ಧ ಚುನಾವಣ ಪ್ರಚಾರ ನಡೆಸಿದರು. ಆದರೆ ಬಿಪನ್ ನಿಲುವು ತುರ್ತುಪರಿಸ್ಥಿತಿಯ ಬಗೆಗೆ ವಿಭಿನ್ನವಾಗಿತ್ತು.

ಅವರು ವಿದ್ಯಾರ್ಥಿಗಳ ಸಾಂಕೇತಿಕ ಜಾಥವನ್ನು ಆಯೋಜಿಸುವುದಕ್ಕೆ ಸೀಮಿತಗೊಳಿಸಿದರು. ಒಂದರ್ಥದಲ್ಲಿ ತುರ್ತುಪರಿಸ್ಥಿತಿಯ ಬಗೆಗೆ ಬಿಪನ್ ಅವರದು ಉದಾರ ನಿಲುವಾಗಿತ್ತೆಂದರೆ ತಪ್ಪಾಗದು.

ಅನಂತಮೂರ್ತಿ ಮತ್ತು ಬಿಪನ್ ಚಂದ್ರ ಇವರೀರ್ವರೂ ಕೋಮುವಾದದ ಬಗೆಗೆ ಬರೆದರು. ಇಬ್ಬರೂ ಪಠ್ಯಪುಸ್ತಕ ಕೇಸರಿಕರಣಗೊಳ್ಳುತ್ತಿರುವುದರ ಬಗ್ಗೆ ಆತಂಕ ವ್ಯಕ್ತಪಡಿಸಿದ್ದರು. ಎಡಪಂಥೀಯ ಚಿಂತಕರೇ ಆಗಿದ್ದ ಇವರಿಬ್ಬರೂ ನಿಧಾನವಾಗಿ ಎಡಪಂಥೀಯ ಚೌಕಟ್ಟನ್ನು ಮೀರುವ ಪ್ರಯತ್ನ ನಡೆಸಿದರು. 20ನೇ ಶತಮಾನದ ಕೊನೆಯ ಘಟ್ಟದಲ್ಲಿ ಬಿ.ಜೆ.ಪಿ ನೇತೃತ್ವದ ಕೇಂದ್ರ ಸರ್ಕಾರ ಅಧಿಕಾರಕ್ಕೆ ಬಂದ ನಂತರ ಅನಂತಮೂರ್ತಿ ಅವರು ಎಲ್ಲೋ ಒಂದು ಕಡೆ ಕಾಂಗ್ರೆಸ್‌ಗೆ ಹತ್ತಿರವಾದಂತೆ ಕಂಡರು. ಬಹಳ ಹಿಂದೆಯೇ ಬಿಪನ್ ಕಾಂಗ್ರೆಸ್‌ಗೆ ಹತ್ತಿರವಾಗಿದ್ದವರು. ಅನಂತಮೂರ್ತಿ ಅವರಂತೂ ಮೋದಿಯ ವಿರುದ್ಧ ತೀವ್ರ ವಾಗ್ಪ್ರಹಾರವನ್ನೆ ನಡೆಸಿ, 'ಮೋದಿಯಿಂದ ಆಳಿಸಿಕೊಳ್ಳಲು ಬಯಸುವುದಿಲ್ಲ' ಎಂದರು. ಕೊನೆಗೂ ತಮ್ಮ ಮಾತಿನಂತೆಯೇ ನಡೆದರು! ಮೋದಿ ನೇತೃತ್ವದ ಸರ್ಕಾರಕ್ಕೆ ನೂರು ದಿನ ತುಂಬುವ ಮುನ್ನವೇ ಬಾರದೂರಿಗೆ ಹೊರಟೇ ಹೋದರು.

ಅನಂತಮೂರ್ತಿ ಮತ್ತು ಬಿಪನ್ ಚಂದ್ರರು ಸ್ಥಾನಗಳನ್ನು ಅನುಭವಿಸುವುದರಲ್ಲಿಯೂ ಸಾಮ್ಯತೆಗಳಿದ್ದವೆಂದು ತೋರುತ್ತದೆ. ಏಕೆಂದರೆ, ಇಬ್ಬರೂ ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾದ ಅಧ್ಯಕ್ಷರಾಗಿ ಬೇರೆ ಬೇರೆ ಕಾಲಾವಧಿಯಲ್ಲಿ ಕಾರ್ಯನಿರ್ವಹಿಸಿದವರು. ದೆಹಲಿಯ ಜವಹರ್‌ಲಾಲ್ ನೆಹರೂ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ಮುಖ್ಯಸ್ಥರಾಗಿ ಬಿಪನ್ ಸೇವೆಸಲ್ಲಿಸಿದರೆ, ಅನಂತಮೂರ್ತಿ ಅವರು ಕೊಟ್ಟಾಯಂನ ಮಹಾತ್ಮ ಗಾಂಧೀ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸೇವೆಸಲ್ಲಿಸಿದರು. ಪತ್ರಿಕಾ ಸಂಪಾದಕರಾಗಿ ಬಿಪನ್ ಚಂದ್ರ ಎನ್ಕ್ವಯಿರಿ ನಡೆಸಿದರೆ, ಅನಂತಮೂರ್ತಿ ಋಜುವಾತು ಮಾಡಿದರು.

ಅನಂತಮೂರ್ತಿ ಮತ್ತು ಬಿಪನ್ ಚಂದ್ರ ಈರ್ವರೂ ದೀರ್ಘಕಾಲ ಅನಾರೋಗ್ಯ ಪೀಡಿತರಾಗಿ ಕೆಲವು ದಿನಗಳ ಅಂತರದಲ್ಲಿ ಅಗಲಿದರು. ಹೀಗೆ ಕೊನೆಯ ದಿನಗಳಲ್ಲಿಯೂ ಇವರ ನಡುವೆ ಹೋಲಿಕೆಗಳಿದ್ದುದು ಕಾಕತಾಳಿಯವೇ ಸರಿ. ಆದರೆ ಈ ಮಹಾಮೇರುಗಳಿಬ್ಬರೂ ಸೃಷ್ಟಿಸಿದ ಶಿಷ್ಯವಲಯ, ಬಿತ್ತಿದ ಚಿಂತನೆಯ ಬೀಜ ಅಪೂರ್ವವಾದುದು. ಇವರಿಬ್ಬರೂ ತಮ್ಮ ಕಾಲಕ್ಕೆ ಸದಾ ಪ್ರತಿಕ್ರಿಯಿಸುತ್ತಲೇ ಬಂದವರು. ಸಮಾಜದ ಸಾಕ್ಷೀಪ್ರಜ್ಞೆಯಾಗಿದ್ದವರು. ಇವರನ್ನು ಇತಿಹಾಸ ದರ್ಪಣವು ಕಣ್ಣುತುಂಬಿಕೊಂಡು ನೆನೆಯುತ್ತಾ, ಈ ಪುಸ್ತಕದಲ್ಲಿ ಎರಡು ಲೇಖನಗಳನ್ನು ಬರೆಸಿ, ಪ್ರಕಟಿಸುವ ಮೂಲಕ ಅವರಿಗೆ ಅಕ್ಷರ ನಮನ ಸಲ್ಲಿಸುತ್ತಿದೆ. ಅನಂತಮೂರ್ತಿ ಅವರೊಡನೆ ಬಹುಕಾಲ ಸಖ್ಯಹೊಂದಿದ್ದ ನಾಡಿನ ಹೆಸರಾಂತ ಇತಿಹಾಸಕಾರರಾದ ಎಸ್.ಚಂದ್ರಶೇಖರ್ ಅವರು ತಮ್ಮ ಮೇಷ್ಟನ್ನು ಆಪ್ತತೆಯಿಂದ ನೆನಪು ಮಾಡಿಕೊಂಡಿದ್ದಾರೆ. ಹಾಗೆಯೇ, ಬಿಪನ್ ಚಂದ್ರ ಅವರೊಡನೆ ದೀರ್ಘಕಾಲದ ಒಡನಾಟ ಹೊಂದಿದ್ದ ನಾಡಿನ ಮತ್ತೋರ್ವ ಹೆಸರಾಂತ ಇತಿಹಾಸಕಾರರಾದ ಬಿ. ಸುರೇಂದ್ರರಾವ್, ಬಿಪನ್ ಚಂದ್ರ ಅವರು ಭಾರತೀಯ ಚರಿತ್ರೆಗೆ ಸಲ್ಲಿಸಿದ ಕೊಡುಗೆಗಳನ್ನು ಮನೋಜ್ಞವಾಗಿ ತಮ್ಮ ಲೇಖನದಲ್ಲಿ ತಿಳಿಸಿಕೊಟ್ಟಿದ್ದಾರೆ. ಈ ಇತಿಹಾಸಕಾರರಿಬ್ಬರಿಗೂ 'ಇತಿಹಾಸ ದರ್ಪಣ' ಮನಃಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

–ಹಂ.ಗು.ರಾಜೇಶ್

# ಯು.ಆರ್. ಅನಂತಮೂರ್ತಿ : ಈಗ ನೆನಪಿಸಿಕೊಂಡಷ್ಟು...

□ ಎಸ್. ಚಂದ್ರಶೇಖರ್
ವಿಶ್ರಾಂತ ಸಮ-ಕುಲಪತಿಗಳು,
# 150 ಬಿ, 5ನೇ ಮೈನ್,
4ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು-10.

ದೆಹಲಿಯ ಇಂಟರ್ ನ್ಯಾಷನಲ್ ಸೆಂಟರ್‌ನ ಸಭಾಂಗಣ. 2010ರ ಬೇಸಿಗೆಯ ಒಂದು ದಿನ. ಸುಮಾರು ಐದುನೂರಕ್ಕೂ ಹೆಚ್ಚಾಗಿ ನೆರೆದಿದ್ದ ದೇಶ-ವಿದೇಶಗಳ ಆಹ್ವಾನಿತರು. ಅಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯವರು ಅಪ್ರತಿಮ ಸಮಾಜವಾದಿ ಹೋರಾಟಗಾರ, ಚಿಂತಕ ರಾಮಮನೋಹರ ಲೋಹಿಯಾ ಅವರ ಜನ್ಮಶತಾಬ್ದಿ ಆಚರಣೆಯ ಅಂಗವಾಗಿ ಎರಡು ದಿನಗಳ ವಿಚಾರಸಂಕಿರಣದ ಉದ್ಘಾಟನೆ ಯಾಗಲಿತ್ತು. ಉದ್ಘಾಟನೆ ಮಾಡಲಿದ್ದವರು ಮೇಷ್ಟ್ರು ಅನಂತಮೂರ್ತಿ.ಯು.ಆರ್., (ನನ್ನಂಥವರಿಗೆ ತರಗತಿಗಳಲ್ಲಿ ಪಾಠ ಮಾಡಿದ ಅನೇಕರಿದ್ದರೂ ಲಂಕೇಶ್ ಮತ್ತು ಅನಂತಮೂರ್ತಿ ಇಬ್ಬರನ್ನೂ ಮೇಷ್ಟ್ರು ಎನ್ನುವುದು ಅಭ್ಯಾಸವಾಯಿತು) ಪ್ರಸಿದ್ಧ ಇತಿಹಾಸಕಾರ ಇರ್ಫಾನ್ ಹಬೀಬ್ ಮುಖ್ಯ ಅತಿಥಿ. ಸ್ವಾಗತಿಸಿದವರು ಗೆಳೆಯ, ಅಕಾಡೆಮಿಯ ಕಾರ್ಯದರ್ಶಿ ಅಗ್ರಹಾರ ಕೃಷ್ಣಮೂರ್ತಿ. ಈ ವಿಷಯದ ಸೆಮಿನಾರ್ ಆಯೋಜಿಸಲು ಸೂಚಿಸಿದ್ದವರು ಅನಂತಮೂರ್ತಿಯವರೇ. ಆದರೆ ಕಾಂಗ್ರೆಸ್ ನೇತೃತ್ವದ ಕೇಂದ್ರ ಸರ್ಕಾರವಿದ್ದಾಗ, ಕಾಂಗ್ರೆಸ್ಸಿನ - ಜವಹರ್‌ಲಾಲ್ ನೆಹರೂ ಅವರ ಕಡು ಟೀಕಾಕಾರರಾಗಿದ್ದ ಲೋಹಿಯಾ ಶತಮಾನೋತ್ಸವವನ್ನು, ಕೇಂದ್ರ ಸಾಹಿತ್ಯ ಅಕಾಡೆಮಿ ಹಮ್ಮಿಕೊಳ್ಳುವ ಬಗ್ಗೆ ಸಂಶಯವಿತ್ತು. ಆದರೆ ಅಗ್ರಹಾರ ಅದನ್ನು ಆಗುಮಾಡಿದರು. ಆ ಬಗ್ಗೆ ಅನಂತಮೂರ್ತಿ ಮತ್ತಿತರ ಸಮಾನ ಮನಸ್ಕರ ಮೆಚ್ಚುಗೆಯನ್ನೂ ಪಡೆದರು. ಅದಿರಲಿ, ಅನಂತಮೂರ್ತಿ ಅವರು ಲೋಹಿಯಾ ಅವರ ಹೋರಾಟ, ದಿಟ್ಟತನ, ಅವರ ತೀಕ್ಷ್ಣಮತಿ, ಪಾಂಡಿತ್ಯಪೂರ್ಣ ಒಳನೋಟ ಕುರಿತ ಅಪಾರ ಮೆಚ್ಚುಗೆ, ತನ್ಮಯತೆಯಿಂದ ಮಾತನಾಡಿದರು. ಭಾರತೀಯ ರಾಜಕಾರಣ, ಸಂಸ್ಕೃತಿಗೆ

ಲೋಹಿಯಾ ಅವರ ಕೊಡುಗೆ ಅಪಾರವಾದುದು. ಅವರು ಒಂದು ರೀತಿಯಲ್ಲಿ ಖಾಯಂ ಭಿನ್ನಮತೀಯ. ಪಕ್ಷದ ಒಳಗೂ – ಹೊರಗೂ. ಲೋಹಿಯಾ ಪ್ರಭಾವ ವಲಯ ಮತ್ತು ಸಂಪರ್ಕಕ್ಕೆ ಬಂದುದನ್ನು ಮೇಷ್ಟ್ರು ಅವರ ಬರವಣಿಗೆ ಮತ್ತು ಭಾಷಣಗಳಲ್ಲಿ ನೂರಾರು ಕಡೆ ಪ್ರಸ್ತಾಪಿಸಿದ್ದಾರೆ. ತಾನೊಬ್ಬ ಲೋಹಿಯಾ ಸಮಾಜವಾದಿ. ಗಾಂಧೀಜಿಯನ್ನು ಪ್ರವೇಶಿಸಿದ್ದೇ ಲೋಹಿಯಾ ಮೂಲಕವೆಂದು ಅವರು ಹೇಳಿಕೊಂಡಿದ್ದಾರೆ. ಅಲ್ಲದೆ, ಕೊನೆಯವರೆಗೂ ಅದನ್ನು ವಿನಯ ಪೂರ್ವಕವಾಗಿಯೇ ಅವರ ಕೃತಿಗಳಲ್ಲಿ ಸ್ಮರಿಸಿದ್ದಾರೆ. ಅಂದಿನ ಉದ್ಘಾಟನೆಯಾದ ಮೇಲೆ, ಮೊದಲ ಗೋಷ್ಠಿಯ ಮೊದಲ ಪ್ರಬಂಧ ಮಂಡನೆ ನನ್ನದೇ ಆಗಿತ್ತು. ವಿಷಯ: ಕರ್ನಾಟಕದ ರಾಜಕೀಯ ಮತ್ತು ಸಂಸ್ಕೃತಿಯ ಮೇಲೆ ಲೋಹಿಯಾ ಪ್ರಭಾವ. ನಾನು ಪೂರ್ಣ ಪ್ರಬಂಧ ಬರೆದು ಮುನ್ನವೇ ಕಳಿಸಿಯಾಗಿತ್ತು. ಅದರ ಪ್ರತಿಗಳನ್ನು ನೆರೆದಿದ್ದವರಿಗೆಲ್ಲಾ ಹಂಚಿದ್ದರು ಕೂಡಾ. ಮೇಷ್ಟ್ರು ಮೊದಲ ಸಾಲಿನಲ್ಲೇ ಕುಳಿತು ಸುಮಾರು 40 ನಿಮಿಷ ನಾನು ಆಡಿದ ಮಾತುಗಳನ್ನು ಎಂದಿನಂತೆ ಕೇಳಿದರು. ಮುಗಿದ ನಂತರ ಚರ್ಚೆಗೆ ಅವಕಾಶವಿತ್ತು. ಎಳೆಯ ವಯಸ್ಸಿನಿಂದಲೇ ಸಮಾಜವಾದದಿಂದ ಆಕರ್ಷಿತನಾಗಿದ್ದ ನನಗೆ ಭಾರತೀಯ ಸಮಾಜವಾದಿಗಳು ಹಲವಾರು ಹಂತಗಳಲ್ಲಿ ನಡೆದುಕೊಂಡ ಬಗ್ಗೆ ಆತಂಕವಿತ್ತು. ಹಲವರಲ್ಲಿದ್ದ ತಾತ್ವಿಕ ಗೊಂದಲ, ಒಂದು ಬಗೆಯ ಸ್ವಪ್ರತಿಷ್ಠೆ, ಸಮಾಜವಾದಿ ಚಳವಳಿಗೇ ಎರವಾದದ್ದು ಇತಿಹಾಸ. 1934ರಿಂದ ಕಾಂಗ್ರೆಸಿನ ಒಂದು ಭಾಗವೇ ಆಗಿದ್ದ ಕಾಂಗ್ರೆಸ್ ಸಮಾಜವಾದಿ ಪಕ್ಷ ಕ್ರಮೇಣ ಕಾಂಗ್ರೆಸ್‌ನಲ್ಲಿ ಬಲಪಂಥೀಯರು ಮೇಲುಗೈ ಪಡೆದಿದ್ದರಿಂದ ಅತೃಪ್ತಿ ಹೊಂದಿ 1944ರ ವೇಳೆಗೆ, ಒಂದು ರೀತಿಯ ಅಸಹಕಾರ ತೋರತೊಡಗಿತು. ಜೊತೆಗೆ ಕಾಂಗ್ರೆಸ್ಸಿನೊಂದಿಗೆ ತನ್ನ ಸಂಬಂಧ ಹೇಗಿರಬೇಕು. ಸೈದ್ಧಾಂತಿಕವಾಗಿ 1942ರವರೆಗೂ ತಮ್ಮೊಡನೆಯೇ ಇದ್ದ ಭಾರತೀಯ ಕಮ್ಯುನಿಷ್ಟರ ಜೊತೆಗೆ ಯಾವ ರೀತಿಯ ಸಂಬಂಧವಿರಬೇಕು, ಈ ಕುರಿತು ಸ್ಪಷ್ಟತೆ ಇದ್ದಂತಿರಲಿಲ್ಲ. 1948ರಲ್ಲಿ ಕಾಂಗ್ರೆಸ್ ನಿರ್ದಿಷ್ಟವಾದ ಒಂದು ಸಂವಿಧಾನ, ಶಿಸ್ತುಗಳನ್ನು ಅಳವಡಿಸಿಕೊಂಡು ಅವಕ್ಕೆ ಎಲ್ಲರೂ ಒಳಪಡಲೇ ಬೇಕೆಂದಾಗ, ಸಮಾಜವಾದಿಗಳು ಕಾಂಗ್ರೆಸ್ ತ್ಯಜಿಸಿದರು.

ಹಾಗೆ ನೋಡಿದರೆ ಕಾಂಗ್ರೆಸ್ ಸೋಷಲಿಸ್ಟರು, ಕಮ್ಯುನಿಸ್ಟರು ಸೇರಿದಂತೆ ಅನಂತರ ಅಸ್ತಿತ್ವಕ್ಕೆ ಬಂದ ಬಹುತೇಕ ಎಲ್ಲ ಪಕ್ಷಗಳೂ ಕಾಂಗ್ರೆಸ್ಸಿನೊಳಗೇ ಇದ್ದವುಗಳು. ಅದರ ಮೂಲ ಉದ್ದೇಶ ಪರಕೀಯ ಇಂಗ್ಲಿಷರಿಂದ ಸ್ವಾತಂತ್ರ್ಯಗಳಿಸುವುದು. ಎಲ್ಲಿಯವರೆಗೆ ಈ ಉದ್ದೇಶಕ್ಕೆ ಬದ್ಧರಾಗಿದ್ದರೊ ವ್ಯಕ್ತಿ, ಗುಂಪುಗಳು ಯಾವುದೇ ಸಿದ್ಧಾಂತವನ್ನು ಒಪ್ಪಿದವರಿರಲಿ ಅವರು ಕಾಂಗ್ರೆಸ್ಸಿನಲ್ಲಿರಬಹುದಿತ್ತು. ಆದರೆ ಸ್ವಾತಂತ್ರ್ಯ ಬಂದ ಮೇಲೆ ಜವಹರ್‌ಲಾಲ್ ನೆಹರೂ ನಾಯಕತ್ವ ಪೂರ್ಣ ಪ್ರಮಾಣದ ಸಮಾಜವಾದಿ ಸಮಾಜ ನಿರ್ಮಾಣವೇ ತನ್ನ ಗುರಿ ಮತ್ತು ನೀತಿ ಎಂದು ಘೋಷಿಸಲು ಒಪ್ಪಲಿಲ್ಲವೋ ಆಗ ಸಮಾಜವಾದಿಗಳು ಬೇಸರಗೊಂಡು ಕಾಂಗ್ರೆಸ್ ತೊರೆದರು. ಸಮಾಜವಾದದ ಹಿತದೃಷ್ಟಿಯಿಂದಲೇ ಈ ತೀರ್ಮಾನ ಪ್ರಶ್ನಾರ್ಹ. ಇತರರಂತೆ ಅಲ್ಲಿಯೇ ಇದ್ದು ಕಾಂಗ್ರೆಸ್ಸನ್ನೇ ಕ್ರಮೇಣ ತನ್ನ ಸೈದ್ಧಾಂತಿಕ ತೆಕ್ಕೆಗೆ ತೆಗೆದುಕೊಳ್ಳಲು ಪ್ರಯತ್ನಿಸಬಹುದಿತ್ತು. ಅದಾಗಲಿಲ್ಲವಲ್ಲ. ಸರಿ. ಸಮಾಜವಾದಿ ಪಕ್ಷ ಸ್ಥಾಪಿಸಿದ ಮೇಲೆ ನಡೆದದ್ದಾರೂ ಏನು? ಸಮಾಜವಾದಿ ಪಕ್ಷವನ್ನು



ಜಾಣ್ಮೆಯಿಂದ ಭಾರತೀಯ ಸಾಮಾಜಿಕ – ಆರ್ಥಿಕ ಸ್ಥಿತಿಯನ್ನು ಸರಿಯಾಗಿ ವಿಶ್ಲೇಷಿಸಿ, ರಾಜಕೀಯ ಪ್ರಜ್ಞೆ ಬೆಳೆದಿದ್ದ ಹಂತವನ್ನು ಸಮಾಧಾನದಿಂದ ಅರಿತು ಸಂಘಟನೆಮಾಡುವುದು ಅವಶ್ಯಕವಾಗಿತ್ತು. ಒಂದು ಕಡೆ ಕಮ್ಯುನಿಸ್ಟರು, ಮತ್ತೊಂದೆಡೆ ವಿವಿಧ ಸೋಷಲಿಸ್ಟರು, ಕಾಂಗ್ರೆಸ್ಸನ್ನು ವಿರೋಧಿಸುವುದರ ಜೊತೆಗೆ ಪರಸ್ಪರ ತಮ್ಮಲ್ಲೇ ಕಚ್ಚಾಡಿಕೊಂಡು, ಪಕ್ಷಗಳನ್ನು, ಸಂಘಟನೆಗಳನ್ನು ಬಲಗೊಳಿಸುವಲ್ಲಿ ವಿಫಲರಾದರು. ಅಷ್ಟೇ ಅಲ್ಲ ಕಾಂಗ್ರೆಸ್ ಮತ್ತು ನೆಹರೂ ಅವರ ಬಗ್ಗೆ ಇದ್ದ ಅಸಮಾಧಾನವನ್ನು, ತಮ್ಮ ಸಂಪೂರ್ಣ ಸೈದ್ಧಾಂತಿಕ ವಿರೋಧಿಗಳಾದ ಕೋಮುವಾದಿಗಳು ಮತ್ತು ಪಾಳೆಗಾರಿ ಹಾಗೂ ಬಂಡವಾಳವಾದಿಗಳ ಹಿತಾಸಕ್ತಿ ಕಾಪಾಡಲು ಹುಟ್ಟಿಕೊಂಡಿದ್ದ ಪಕ್ಷಗಳ ಜೊತೆ ಕೈ ಜೋಡಿಸಿದ್ದು ಆತ್ಮಹತ್ಯಾತ್ಮಕವಲ್ಲವೇ? ಹಾಗೆಯೇ ಲೋಹಿಯಾ ಅವರ ಕಾಂಗ್ರೆಸ್ಸೇತರವಾದ (Non-Congressim) 'ಶತ್ರುವಿನ ಶತ್ರು ಮಿತ್ರ' ಎನ್ನುವ ಅವರ ನಿಲುವು ಬಹುತೇಕ ಸಮಾಜವಾದಿ ವ್ಯಕ್ತಿಗಳನ್ನು ಪಕ್ಷ ತ್ಯಜಿಸುವಂತೆ ಮಾಡಿತು. ಇವೆಲ್ಲದರಿಂದ ಸಮಾಜವಾದಿ ಚಳವಳಿಗೆ ಹಿನ್ನೆಡೆಯಾಗಿದ್ದಂತೂ ನಿಜ. ಕರ್ನಾಟಕದಲ್ಲಿಯೇ ಸಮಾಜವಾದಿ ಪಕ್ಷ, ಪ್ರಜಾಸೋಷಲಿಸ್ಟ್ ಪಕ್ಷ, ಕೃಷಿಕ್ ಮಜ್ದೂರ್ ಪ್ರಜಾಪಕ್ಷ, ಸಂಯುಕ್ತ ಸೋಷಲಿಸ್ಟ್ ಪಕ್ಷ ಹೀಗೆ ಹಲವು ಹೋಳುಗಳಾಗಿ ಪಕ್ಷ – ಸಂಘಟನೆಗಳು ಒಡೆದವು. ಸ್ವವಿಮರ್ಶೆಯೆನ್ನುವುದು ನಾವು ನಂಬಿದ ಆದರ್ಶಕ್ಕೇ ಎರವಾಗಿ ಬಿಡಬಾರದಲ್ಲವೇ?

ಕರ್ನಾಟಕದಲ್ಲಿ ಸಮಾಜವಾದಿ ಪಕ್ಷ ಚಿಂದಿ ಚಿಂದಿಯಾದದ್ದು ಬಹುತೇಕರು ಪಕ್ಷಾಂತರಿಗಳಾದದ್ದು, ಸಮಾಜವಾದಿಗಳೆನಿಸಿಕೊಂಡ ಸಾಹಿತಿ, ಬುದ್ಧಿಜೀವಿಗಳ ಭಿನ್ನಾಭಿಪ್ರಾಯ, ಜಗಳಗಳು ಇವೆಲ್ಲಾ ಸಮಾಜವಾದಿ ಚಳವಳಿಯ ಮೇಲೆ ಭೀಕರ ಪರಿಣಾಮ ಬೀರಿದವು. ಆ ಬಗ್ಗೆ ಎಂಬತ್ತರ ದಶಕದಲ್ಲಿಯೇ ನಮ್ಮ ಧೀಮಂತ ಸಮಾಜವಾದಿ ಚಿಂತಕರಲ್ಲೊಬ್ಬರಾದ ದೇವನೂರ ಮಹಾದೇವ 'ನನ್ನ ಕಣ್ಣೆದುರಿಗೇ ಕಳೆದು ಹೋದ

ಸಮಾಜವಾದಿ ಪಕ್ಷ'ವೆಂದು ಅಪಾರ ದುಃಖದಿಂದ ಒಂದು ನಿಯತಕಾಲಿಕದಲ್ಲಿ ಬರೆದಿದ್ದರು. ಆದರೆ ಕರ್ನಾಟಕದ ಸಾಹಿತ್ಯ-ಸಾಂಸ್ಕೃತಿಕ ಕ್ಷೇತ್ರದ ಮೇಲೆ ಲೋಹಿಯಾ ಬೀರಿದ ಪ್ರಭಾವ ಮಿಕ್ಕೆಲ್ಲ ಪ್ರಭಾವಕ್ಕಿಂತಲೂ ದಟ್ಟವಾದ್ದು, ಗುಣಾತ್ಮಕವಾದುದು. ಲೋಹಿಯಾ ಅಪ್ಪಟ ಜನತಂತ್ರವಾದಿ. ನಾಗರೀಕ ಹಕ್ಕುಗಳನ್ನು ಏನೇ ಆಗಲಿ ರಕ್ಷಿಸಿಕೊಳ್ಳಬೇಕೆಂದು ಏಕಾಂಗಿಯಾಗಿಯಾದರೂ ಹೋರಾಡಬಲ್ಲವರಾಗಿದ್ದರು. ಸ್ವಾತಂತ್ರ್ಯೋತ್ತರ ಭಾರತದಲ್ಲೂ ದೊಡ್ಡ ಪ್ರತಿಭಟನಾಕಾರರು ಯಾರು ಎಂಬ ಪ್ರಶ್ನೆ ಬಂದರೆ ನಿಸ್ಸಂದೇಹವಾಗಿ ಹೇಳಬಹುದು ಅದು ಲೋಹಿಯಾ ಅವರೇ. ಮೇಷ್ಟ್ರು ಲೋಹಿಯಾಗೆ ಹತ್ತಿರದವರು. ಒಡನಾಡಿದವರು ಅವರ ಚಿಂತನೆ-ಹೋರಾಟಗಳನ್ನು ಅಪಾರವಾಗಿ ಮೆಚ್ಚಿದವರು. ಆದ್ದರಿಂದಲೇ ಬಹಳಕಾಲ ಅವರು ಕಾಂಗ್ರೆಸ್ ವಿರೋಧಿ. ನೆಹರೂ ಮತ್ತು ಇಂದಿರಾಗಾಂಧಿ ಅವರುಗಳ ಬಗ್ಗೆ ಅಸಮಾಧಾನ. ಲೋಹಿಯಾ ತೀರಿಕೊಂಡ ಮೇಲೆ ಇಂದಿರಾಜೀ ಅಧಿಕಾರಕ್ಕೆ ಏರಿದರು. 1971-72ರ ಚುನಾವಣೆಗಳಲ್ಲಿ ಅವರ ನೇತೃತ್ವದ ಕಾಂಗ್ರೆಸ್ ಅಪಾರ ಜನಬೆಂಬಲ ಗಳಿಸಿತು. ಪಾಕಿಸ್ತಾನವನ್ನು ಸೋಲಿಸಿ, ಬಾಂಗ್ಲಾ ವಿಮೋಚನೆ ಮಾಡಲು ಕಾರಣಕರ್ತರಾದ ಅವರಿಗೆ ಸಿಕ್ಕ ಜನಪ್ರಿಯತೆ ಅಪಾರ. ಆದರೆ ಇದು ಒಂದು ರೀತಿಯ ಏಕ ವ್ಯಕ್ತಿ ಪಕ್ಷ, ಪ್ರಭುತ್ವವಾಗತೊಡಗಿದಾಗ, ಜನತಂತ್ರದಲ್ಲಿ ನಿಷ್ಠೆಯಿದ್ದವರು ಸಹಿಸದಾದರು. 1975ರಲ್ಲಿ ತುರ್ತು ಪರಿಸ್ಥಿತಿ ಘೋಷಿಸಿ, ನಾಗರಿಕ ಹಕ್ಕುಗಳ ದಮನ ಪ್ರಾರಂಭವಾದಾಗ ಅದನ್ನು ವಿರೋಧಿಸಿದವರು ಹಲವರು. ಕರ್ನಾಟಕದ ಬುದ್ಧಿ ಜೀವಿಗಳಲ್ಲಿ / ಸಾಹಿತಿ-ಬರಹಗಾರರಲ್ಲಿ ಅವರ ವಿರುದ್ಧ ಪ್ರತಿಭಟಿಸಿದವರಲ್ಲಿ ಅನಂತಮೂರ್ತಿ ಮುಖ್ಯರು. ಅದಕ್ಕಾಗಿ ಅವರು ಸರ್ಕಾರದ ಕೋಪವನ್ನು ಎದುರಿಸಬೇಕಾಯಿತು.

ಭೂಗತ ಚಟುವಟಿಕೆಗಳೂ ನಡೆದವು. ಅವಕ್ಕೆ ತಮ್ಮದೇ ರೀತಿಯಲ್ಲಿ ನೆರವಾದವರು ಹಲವರು. ಕರಪತ್ರಗಳು, ಮುಂತಾದ ಭೂಗತ ಸಾಹಿತ್ಯ ರಚನೆಯಾಯಿತು. ಮೇಷ್ಟ್ರು ಆ ಕೆಲಸದಲ್ಲಿಯೂ ನೆರವಾದರು. ಜಾರ್ಜ್ ಫರ್ನಾಂಡಿಸ್, ಜೆ.ಎಚ್.ಪಟೇಲ್ ಮುಂತಾದವರು ಬುಡಮೆಲು ಕೃತ್ಯಗಳಲ್ಲಿ ತೊಡಗಿದವರು. ಮೇಷ್ಟ್ರು ಅವರ ಒಡನಾಡಿ. ಖಾಸಾ ಸ್ನೇಹಿತ. 1977ರ ಮಾರ್ಚ್‌ನಲ್ಲಿ ಪಾರ್ಲಿಮೆಂಟ್‌ಗೆ ಚುನಾವಣೆ ನಡೆಯಿತು. ಕಾಂಗ್ರೆಸ್ ಅಧಿಕಾರ ಕಳೆದುಕೊಂಡಿತು. ಇಂದಿರಾಗಾಂಧಿಯೂ ಸೋತರು. ಜನತಾ ಪಕ್ಷ ಅಧಿಕಾರಕ್ಕೇರಿತು. ಇಂದಿರಾಗಾಂಧಿಯವರನ್ನು ಲೋಕಸಭೆ ಒಳಗೆ ಕರೆದುಕೊಳ್ಳಲು ಕರ್ನಾಟಕದಿಂದ ಒಬ್ಬ ಚುನಾಯಿತ ಸದಸ್ಯರಿಂದ ರಾಜಿನಾಮೆ ಕೊಡಿಸಿ ಅವರನ್ನು ಅಲ್ಲಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿಸಲಾಯಿತು. ಇದು ಅಪ್ಪಟ ಜನತಂತ್ರದಲ್ಲಿ ನಂಬಿಕೆಯಿದ್ದ ಅನಂತಮೂರ್ತಿಯಂಥವರಿಗೆ ಸಹಿಸಲಸಾಧ್ಯವಾದ ಬೆಳವಣಿಗೆ. ಅವರಂತೂ ಇಂದಿರಾಗಾಂಧಿಯವರನ್ನು ವಿರೋಧಿಸಿ ಬಹಿರಂಗ ಚುನಾವಣಾ ಸಭೆಗಳಲ್ಲಿ ಭಾಷಣ ಮಾಡಿದರು. ಈ ಕುರಿತು ನಡೆದ ಪ್ರಸಂಗವೊಂದು ಕುತೂಹಲಕಾರಿಯಾಗಿದೆ. ಮೇಷ್ಟ್ರು ಒಬ್ಬ ವಿಶ್ವವಿದ್ಯಾಲಯದ ಉದ್ಯೋಗಿ. ಉದ್ಯೋಗಿ ಅನುಸರಿಸಬೇಕಾದ ಸೇವಾನಿಯಮ, ಶಿಸ್ತುಗಳಿವೆ. ಅದನ್ನವರು ಉಲ್ಲಂಘಿಸಿದ್ದಾರೆ. ಹಾಗೆಂದು ಅವರ ವಿವರಣೆ ಕೇಳಿಯಾಯ್ತು. ಅವರು ಸಮರ್ಪಕ ಉತ್ತರವನ್ನೂ ಕೊಟ್ಟರು. ಕರ್ನಾಟಕದಲ್ಲಿ ಆಗ ಮುಖ್ಯಮಂತ್ರಿ ದೇವರಾಜ ಅರಸು. ತುರ್ತು ಪರಿಸ್ಥಿತಿಯ ಅವಾಂತರಗಳಿಗೆ ಅವರು ಹೆಚ್ಚು ಅವಕಾಶ

ಕೊಡದ ಉದಾರವಾದಿ. ಅದು ಒಂದು ಕಡೆಯಾದರೆ, ಈ ಸಂದರ್ಭದಲ್ಲಿ ಅನಂತಮೂರ್ತಿಯವರನ್ನು ಬೆಂಬಲಿಸಿ ಲಂಕೇಶ್ ಅವರು ಪತ್ರಿಕೆಗಳಿಗೆ ಬರೆದರು. ರಾಜ್ಯದ ರಾಜ್ಯಪಾಲರು ಅವರನ್ನೂ ವಿವರಣೆ ಕೇಳಿದರು. ಅವರು ಕೊಟ್ಟ ವಿವರಣೆ ಅದ್ಭುತವಾದದ್ದು. "ಭಾರತದ ಒಬ್ಬ ನಾಗರಿಕನಾಗಿ, ಜನತಂತ್ರವನ್ನು, ಮೂಲಭೂತಹಕ್ಕುಗಳನ್ನು ರಕ್ಷಿಸುವುದು ಮತ್ತು ಕಿತ್ತುಕೊಳ್ಳುವವರ ವಿರುದ್ಧ ಪ್ರತಿಭಟಿಸುವುದು ಎಲ್ಲರ ಕರ್ತವ್ಯ. ಹಾಗೆಂದು ಸಂವಿಧಾನವೇ ಹೇಳುತ್ತದೆ. ಅದನ್ನು ಈ ದೇಶದ ನಾಗರಿಕರಾಗಿ ಅನಂತಮೂರ್ತಿ ಮಾಡಿದ್ದಾರೆ, ನಾನು ಮಾಡುತ್ತಿದ್ದೇನೆ. ಆದರೆ ಈ ದೇಶದ ನಾಗರೀಕರಾದ ನೀವು ಯಾಕೆ ಮಾಡಲಿಲ್ಲ?" ಇದು ಲಂಕೇಶ್ ಉತ್ತರದ ಸಾರಾಂಶ. ಹೀಗೆ ಜನತಂತ್ರವಾದಿಗಳು, ಅದರಲ್ಲೂ ಲೋಹಿಯಾ ವಿಚಾರ-ಹೋರಾಟಗಳಿಂದ ಪ್ರಭಾವಿತರಾದವರು, ನಾಗರಿಕ ಹಕ್ಕುಗಳ ಸಮರ್ಥನೆಗಾಗಿ ಸಮಾಜವಾದಿ ಆಶಯಗಳ ಬೆಂಬಲಿಗರಾಗಿಯೇ ಕೆಲಸ ನಿರ್ವಹಿಸುತ್ತಿರುವವರು.

ಇವೆಲ್ಲದರ ಬಗ್ಗೆ ವಿವರವಾಗಿಯೇ ನಾನು ಮಾತನಾಡಿದ್ದೆ. ಅನಂತಮೂರ್ತಿಯವರಿಗೆ ನನ್ನ ಮಾತುಗಳು ಅಷ್ಟಾಗಿ ಇಷ್ಟವಾಗಿರಲಿಲ್ಲ. ಚರ್ಚೆಗೆ ಪ್ರಾರಂಭ ಮಾಡಿದವರೇ ಅವರು. ಅವರು ಅಸಮಾಧಾನವನ್ನು ವ್ಯಕ್ತಪಡಿಸಿ, "ನಾನು ನಿನ್ನ ಹತ್ತಿರ ಬಹಳ ಚರ್ಚಿಸುವುದಿದೆ, ಸಂಜೆ ಒಂದು ಘಂಟೆ ಸಮಯ ನನಗಾಗಿ ಮೀಸಲಿಡಬಹುದೇ" ಎಂದು ಕೇಳಿದರು. ನಾನು ಸಂತೋಷದಿಂದಲೇ ಒಪ್ಪಿದೆ. ಯಾಕೆಂದರೆ ಮೇಷ್ಟ್ರ ಜೊತೆಗಿನ ಮಾತು ಯಾವಾಗಲೂ ಅದ್ಭುತ. ಅವರಿಂದ ನನ್ನಂತವರು ಕಲಿತದ್ದು ಅಪಾರ. ಗೋಷ್ಠಿಗಳು ಮುಗಿದ ನಂತರ ಆರು ಘಂಟೆಗೆ ಅತಿಥಿ ಗೃಹದ ಲೌಂಜಿನಲ್ಲಿ ಭೇಟಿಯಾದೆವು. ಅವರ ತಗಾದೆ ಇದ್ದದು ನಾನು ಮಾತನಾಡಿದ ವಿವರಗಳ ಬಗ್ಗೆ ಅಲ್ಲ. ಆದರೆ ಸಮಾಜವಾದಿಗಳೆನ್ನಿಸಿಕೊಂಡವರು ವಿವಿಧ ಘಟ್ಟಗಳಲ್ಲಿ ನಡೆದುಕೊಂಡ ರೀತಿಯನ್ನು ಟೀಕಿಸಿದ್ದರ ಬಗ್ಗೆ, ಸಮಾಜವಾದಿಗಳೆನಿಸ ಕೊಂಡ ಸಾಹಿತಿ-ಬುದ್ಧಿಜೀವಿಗಳ ಜಗಳಗಳು ಬೀದಿಜಗಳಗಳನ್ನು ನೆನಪಿಸುತ್ತಿದ್ದವೆಂದು ಮಾತನಾಡಿದ ಬಗ್ಗೆ. ಹಾಗೆಯೇ, ಅವೆಲ್ಲ ಬೆಳವಣಿಗೆಗಳನ್ನು ನಾನು ಸಹಾನುಭೂತಿಯಿಂದ ನೋಡಬೇಕಾಗಿತ್ತು, ಹಾಗೆ ಮಾಡಿಲ್ಲ ಎಂದೂ ಅವರ ತಕರಾರಿತ್ತು. ಇರಲಿ, ಆ ಮಾತುಕತೆಗಳಲ್ಲಿ ಸಮಾಜವಾದಿ ಚಳವಳಿ, ಕಾಗೋಡು ಸತ್ಯಾಗ್ರಹ ಇಂತಲ್ಲಿ ಮೇಷ್ಟರ ತಂದೆಯವರ ಮಾರುತಿ ಪ್ರೆಸ್‌ನ ಪಾತ್ರ, ಗೋಪಾಲಗೌಡರಿಗೆ ಅನಂತಮೂರ್ತಿಯವರಿಂದಲೇ ಲೋಹಿಯಾರ ಪರಿಚಯವಾದದ್ದು, ಒಂದು ರೀತಿಯಲ್ಲಿ ಅಡಿಗರೂ ಆ ಪ್ರಭಾವಕ್ಕೆ ಒಳಗಾಗಿ ಲೋಹಿಯಾರ ರಾಜಕೀಯದ ಮಧ್ಯೆ ಬಿಡುವು ಅನುವಾದ ಮಾಡಿದ್ದು ಇದೆಲ್ಲಾ ಸುಳಿದು ಹೋದವು. ಇದು ನನ್ನ-ಅವರ ಕೊನೆಯ ಸೆಮಿನಾರಿನ ಭೇಟಿ.

ಮೇಲಿನದನ್ನು ಹೇಳಿದ್ದು ಸಮಾಜವಾದದ ಬಗ್ಗೆ ಅನಂತಮೂರ್ತಿಯವರಿಗೆ ಇದ್ದ ಅತೀವ ಪ್ರೀತಿಯನ್ನು, ಅದು ಒಂದು ಚಳವಳಿಯಾಗಿ ನೆಲಕಚ್ಚುತ್ತಿದೆ ಎಂಬ ನಿಜವನ್ನು ಬಹಳ ಆತಂಕದಿಂದ ನೋಡುವ ಬಗೆಯನ್ನು ವಿವರಿಸಲಿಕ್ಕಾಗಿ. ಹಾಗೆಂದು ಅನಂತಮೂರ್ತಿ ಯವರ ಚಿಂತನೆ ಅಲ್ಲಿಗೇ ನಿಂತಿರಲಿಲ್ಲ. ಅವರು ಒಂದು ರೀತಿ ತಮ್ಮ ಅಭಿಪ್ರಾಯಗಳನ್ನು -ಚಿಂತನೆಗಳನ್ನು ಪರಿಷ್ಕರಿಸುತ್ತಲೇ ಸಾಗಿದವರು. ನೆಹರೂ ಬಗ್ಗೆ ಅವರ ಅನಿಸಿಕೆಗಳು ಬದಲಾದವು. ನೆಹರೂ ಅವರನ್ನು ಗಾಂಧೀಜಿ ತಮ್ಮ ವಾರಸುದಾರರೆಂದು ಹೆಸರಿಸಿದ್ದನ್ನು,

ಭಾರತದ ಅಂದಿನ ಸನ್ನಿವೇಶದಲ್ಲಿ ಅನಿವಾರ್ಯವಾಗಿತ್ತೆಂದು ಅವರು ಸಮರ್ಥಿಸಿಕೊಂಡರು. ಹಾಗೆಯೇ ನೆಹರೂ ಅವರ ಮಿಶ್ರ ಆರ್ಥಿಕ ನೀತಿಯನ್ನು.

ಅನಂತಮೂರ್ತಿಯವರ ಬಗ್ಗೆ ಮೊದಲು ನನಗೆ ಆಸಕ್ತಿ ಹುಟ್ಟಿದ್ದು ಅವರ ಸಂಸ್ಕಾರ ಕಾದಂಬರಿ ಆಧರಿತ ಸಿನಿಮಾ ನೋಡಿದಾಗ. ಬೆಂಗಳೂರು ವಿಶ್ವವಿದ್ಯಾಲಯ ಸೇರಿಕೊಂಡ ಮೇಲೆ ಕನ್ನಡ ವಿಭಾಗದವರು ಪ್ರತಿ ವರ್ಷ ನಡೆಸುತ್ತಿದ್ದ ವಿಚಾರ ಸಂಕಿರಣಗಳಲ್ಲಿ ಅವರ ವಿಚಾರಪೂರಿತ ಮಾತುಗಳನ್ನು ಹಲವರಂತೆ ತಪ್ಪಿಸಿಕೊಳ್ಳದೆ ಕೇಳುತ್ತಿದ್ದೆ; ಲಂಕೇಶ್, ಚಂಪಾ, ತೇಜಸ್ವಿ, ರಾಮದಾಸ್, ಗೋವಿಂದರಾವ್ ಹೀಗೆ ನನ್ನ ಹಿರಿತಲೆಮಾರಿನ ಸಾಹಿತಿ-ಚಿಂತಕರನ್ನು ನೋಡಿದ್ದು ಅಲ್ಲೇ. ಅಲ್ಲಿ ನಡೆಯುತ್ತಿದ್ದ ವಾಗ್ವಾದಗಳು, ಸಂಸ್ಕೃತಿ ಚಿಂತನೆ ನನ್ನಲ್ಲಿ ಚರಿತ್ರೆಯ ಕಲ್ಪನೆ ಬಗ್ಗೆ ಹೊಸ ಹೊಳಹುಗಳನ್ನು ಮೂಡಿಸಿದ್ದು ನನ್ನ ಸೌಭಾಗ್ಯವೆಂದೇ ತಿಳಿದಿದ್ದೇನೆ. ವರ್ಗ ಹಿತಾಸಕ್ತಿಗಿಂತಲೂ ಜಾತಿ ಹಿತಾಸಕ್ತಿಗಳೇ ನಮ್ಮ ಸಂದರ್ಭದಲ್ಲಿ ನಿರ್ಣಾಯಕ ಪಾತ್ರವಹಿಸುತ್ತಿವೆ ಎಂದು ನನಗೆ ಅನ್ನಿಸತೊಡಗಿದ್ದು, ನನ್ನ ಹಳ್ಳಿಯ ಅನುಭವದ ಜೊತೆಗೆ ನಾನು ಕನ್ನಡ-ಸಾಹಿತ್ಯ-ಸಾಂಸ್ಕೃತಿಕ ಲೋಕದ ಸಂಪರ್ಕಕ್ಕೆ ಬಂದ ನಂತರವೇ. 1985ರಲ್ಲಿ ಮೈಸೂರಿನಲ್ಲಿ 'ಜಾತಿ ವಿನಾಶ' ಒಕ್ಕೂಟದವರು ಒಂದು ಸೆಮಿನಾರಿನಲ್ಲಿ ಭಾಗವಹಿಸಲು ಕರೆದಿದ್ದರು. ಮೈಸೂರು ವಿಶ್ವವಿದ್ಯಾಲಯದ ಮಾನವಿಕ ಸಭಾಂಗಣದಲ್ಲಿ ಅದು ಏರ್ಪಾಟಾಗಿತ್ತು. ರಾಮದಾಸ್, ದೇವನೂರ ಮಹಾದೇವ, ಗೋವಿಂದಯ್ಯ ಮುಂತಾದವರಿದ್ದ ಸಭೆ. ಅನಂತಮೂರ್ತಿ ಅಲ್ಲಿಗೆ ಯಾವಾಗ ಬಂದಿದ್ದರೊ ತಿಳಿದಿರಲಿಲ್ಲ. ಅಂಬೇಡ್ಕರ್ ಮತ್ತು ಜಾತಿವಿನಾಶ ಕುರಿತು ನನ್ನ ಮಂಡನೆ. ಗೋಷ್ಠಿ ಮುಗಿದ ಮೇಲೆ ಗೋವಿಂದಯ್ಯನವರ ಜೊತೆ ಮೇಷ್ಟ್ರು ಬಂದರು. ಅದು ನಮ್ಮ ಮೊದಲ ಭೇಟಿ. ಅಷ್ಟೊತ್ತಿಗೆ ವಸಾಹತುಕಾಲದ ಆಧುನಿಕ ಮೈಸೂರು ಕುರಿತ ನನ್ನ ಲೇಖನ ಸಂಕಲನವೊಂದು ಪ್ರಕಟವಾಗಿತ್ತು. ಗೋವಿಂದಯ್ಯನವರ ಜೊತೆ ಸಂಜೆ ಭೇಟಿಯಾದೆವು. ಅವರ ಆಸಕ್ತಿ ಇದ್ದುದು ನಾನು ಆಡಿದ ಮಾತುಗಳ ಬಗ್ಗೆ ಒಂದು ಕಡೆಯಾದರೆ, ಕನ್ನಡದಲ್ಲಿ ಸಂಕೀರ್ಣವಾದ ಸಮಾಜ ವಿಜ್ಞಾನ ವಿಷಯಗಳನ್ನು ಹೇಗೆ ಮಾತನಾಡಲು, ಬರೆಯಲು ಸಾಧ್ಯವಾಗಿಸಬೇಕು ಎಂಬುದರ ಬಗ್ಗೆ. ಹಾಗೆ ನೋಡಿದರೆ, ನಾನು ಕನ್ನಡದಲ್ಲಿ ಬರೆಯಲು ಸ್ಫೂರ್ತಿ ನೀಡಿದವರಲ್ಲಿ ಜಿ.ಎಸ್.ಶಿವರುದ್ರಪ್ಪ ಮತ್ತು ಇತರರೊಂದಿಗೆ, ಅನಂತಮೂರ್ತಿಯವರೂ ಒಬ್ಬರು. ಬೆಂಗಳೂರು, ಮೈಸೂರು, ಹೆಗ್ಗೋಡು ಹೀಗೆ ನಾನು ಆಗಾಗ ಅವರೊಂದಿಗೆ ಚರ್ಚಿಸುವುದಿತ್ತು. ನಾನು ಏನು ಯೋಚನೆ ಮಾಡುತ್ತಿದ್ದೇನೆ, ಏನು ಬರೆಯುತ್ತಿದ್ದೇನೆ ಎಂದು ಸತತವಾಗಿ ವಿಚಾರಿಸುತ್ತಿದ್ದವರಲ್ಲಿ ಮೇಷ್ಟ್ರೇ ಅತ್ಯಂತ ಪ್ರಮುಖರೆಂದು ನನ್ನ ಭಾವನೆ. ನಮ್ಮ ಭೇಟಿಗಳಲ್ಲಿ ನನಗೆ ತುಂಬಾ ಇಷ್ಟವಾಗುತ್ತಿದ್ದುದು, ಅವರ ಕೇಳಿಸಿಕೊಳ್ಳುವ ತಾಳ್ಮೆ, ಗುಣ ಮತ್ತು ಗಂಭೀರ ವಿಚಾರಗಳಾದರೆ ಅವುಗಳಿಗೆ ಸೂಕ್ಷ್ಮತೆ, ತೀಕ್ಷ್ಣತೆ ತುಂಬಬಹುದಾದದ್ದು ಹೇಗೆ ಎನ್ನುವ ಬಗ್ಗೆ ಅವರ ಸಲಹೆ, ಸೂಚನೆಗಳು.

ಒಮ್ಮೆ ಗೆಳೆಯರೊಡನೆ ಬೆಂಗಳೂರಿನ ಯಾವುದೋ ಒಂದು ಫಾರ್ಮ್ ಹೌಸ್‌ನಲ್ಲಿ ಸಂಜೆಯ ಸಮಾರಾಧನೆ. ಮಂಡಲ್ ವರದಿ-ಅಯೋಧ್ಯೆ ಪ್ರಕರಣಗಳು ತೀವ್ರವಾಗಿ ಚರ್ಚೆಯಾಗುತ್ತಿದ್ದ ಸಂದರ್ಭ. 1991ರ ಚಳಿಗಾಲ. ಮೇಷ್ಟ್ರು ಮಹಾತ್ಮಗಾಂಧಿ ವಿಶ್ವವಿದ್ಯಾಲಯದ ಕುಲಪತಿ ಅವಧಿ ಮುಗಿಸಿ ವಾಪಸಾಗಿದ್ದರು. 1980ರ ದಶಕದಲ್ಲಿ

ವರ್ಷಗಟ್ಟಲೆ ದೇಶದ ವಿವಿಧ ಪತ್ರಾಗಾರಗಳಲ್ಲಿ ಕುಳಿತು ಸ್ವಾತಂತ್ರ ಸಂಗ್ರಾಮ ಕುರಿತ ಕಡತಗಳನ್ನು ಓದಿದ್ದೆ. ಟಿಪ್ಪಣಿಗಳನ್ನೂ ಮಾಡಿಕೊಂಡಿದ್ದೆ. ಸಮಾರಾಧನೆಯಲ್ಲಿ ಸಹಜವಾಗಿಯೇ ಪ್ರಚಲಿತವಾಗಿದ್ದ ಮಂಡಲ್-ಅಯೋಧ್ಯ ವಿಚಾರ ಪ್ರಸ್ತಾಪಕ್ಕೆ ಬಂತು. ಸ್ವಾತಂತ್ರ ಪೂರ್ವ ಕಾಂಗ್ರೆಸ್ಸಿನಲ್ಲಿದ್ದ ತಾತ್ವಿಕ ಗೊಂದಲಗಳು, ಎಡ, ಬಲ ಪಂಥಗಳು, ಮತೀಯವಾದಿಗಳು ಮೊದಲಾದ ವಿಚಾರವಾಗಿ ಮಾತು ಹರಿದವು. ಅಲ್ಲಿ ಮೇಷ್ಟ್ರು ಬಹಳ ಇಷ್ಟಪಡುವ ರಾಜಾಜಿಯವರನ್ನು ಕುರಿತು ಅವರ ಬಲಪಂಥೀಯ ಒಲವಿನ ಬಗ್ಗೆ, ಒಟ್ಟಾರೆ ಅವರು ಬಲಪಂಥೀಯರೂ, ಅಂತಿಮವಾಗಿ ಕೆಳಜಾತಿ, ಕೆಳವರ್ಗದವರ ಬಗ್ಗೆ ಅಷ್ಟಾಗಿ ಯೋಚಿಸದವರೂ ಆಗಿದ್ದರೆಂದು ನಾನು ವಾದಿಸಿದೆ. ಮೇಷ್ಟ್ರು ಎಂದಿನಂತೆ ನನ್ನ ಅಭಿಪ್ರಾಯಗಳನ್ನು ಹೇಗೆ ಸೂಕ್ಷ್ಮವಾಗಿಸಿಕೊಳ್ಳಬೇಕು ಎಂಬ ಬಗ್ಗೆ ಸಲಹೆಗಳನ್ನು ನೀಡಿದರು. ಹಿಂದೂ ಮಹಾಸಭೆ, ಸಾವರ್ಕರ್, ಹೀಗೆ ಅನೇಕ ವಿಚಾರಗಳು ಬಂದು ಹೋದವು. ಒಟ್ಟಾರೆ ನನಗೆ ಅವತ್ತು ಅನಿಸಿದ್ದು ಅವರು ಉದಾರವಾದಿ, ಸಮನ್ವಯವಾದಿ ಎಂದೇ. ಮತೀಯವಾದಿಗಳು: ಹಿಂದೂ ಇರಲಿ, ಮುಸ್ಲಿಮರಿರಲಿ, ಎಲ್ಲರೂ ಗಾಂಧಿಜೀಯವರ ಹೋರಾಟಗಳಲ್ಲಿ ಪಾಲ್ಗೊಳ್ಳಲಿಲ್ಲ. ವಿಶೇಷವಾಗಿ 1940ರ ದಶಕದಲ್ಲಂತೂ ಅವರು ನಿಷ್ಕ್ರಿಯರಾಗಿದ್ದರು ಅಥವಾ ಮತೀಯ ಕಿಚ್ಚು ಹಚ್ಚಲು ಪ್ರಯತ್ನಿಸಿದ್ದರು ಎಂಬ ಗ್ರಹಿಕೆಯನ್ನು ನನ್ನ ಓದಿನ ಆಧಾರದಿಂದ ನಾನು ಒಂದು ರೀತಿ ಅಧಿಕಾರಯುತವಾಗಿಯೇ ಮಾತನಾಡಿದ್ದು ನೆನಪು. ಮೇಷ್ಟ್ರು ಅಭಿಮಾನದಿಂದಲೇ ಕೇಳಿಸಿಕೊಂಡರು.

ನನ್ನ ಎರಡು ಪುಸ್ತಕಗಳು ಪ್ರಕಟವಾಗಲು ಮೇಷ್ಟ್ರೇ ಕಾರಣ. ಒಂದು *ಅಂಬೇಡ್ಕರ್ ಮತ್ತು ಗಾಂಧಿ* ಇನ್ನೊಂದು *ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ* (ಇದು ಇಂಗ್ಲಿಷ್‌ನಲ್ಲಿದೆ). *ಅಂಬೇಡ್ಕರ್ ಮತ್ತು ಗಾಂಧಿ* ಸಂಕಲನವನ್ನು ಮೈಸೂರಿನಿಂದ ಬಸ್ಸಿನಲ್ಲೇ ಬಂದು ಬಿಡುಗಡೆಮಾಡಿದ್ದು ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಇದೆ. ಅದು 1992ರ ಡಿಸೆಂಬರ್‌ನಲ್ಲಿ. ಆ ಸಂಕಲನದ ಬಹಳಷ್ಟು ಲೇಖನಗಳು ಮೂಲ ಇಂಗ್ಲಿಷ್‌ನಲ್ಲೇ ಇದ್ದವು. ಕೆಲವು ಗೆಳೆಯರು ಇಂಗ್ಲಿಷ್‌ನಲ್ಲೇ ಅವು ಮೊದಲು ಬರಲಿ ಎನ್ನುತ್ತಿದ್ದರು. ಆದರೆ ಅವು ನಮ್ಮ ಸಂದರ್ಭದಲ್ಲೇ ಚರ್ಚೆಗೆ ಬರಲಿ ಕನ್ನಡದಲ್ಲಿ ಪ್ರಕಟಿಸಿ ಎಂದು ಒತ್ತಾಸೆಯಾದವರು ದೇವನೂರು ಮಹಾದೇವ, ಸಿದ್ಧಲಿಂಗಯ್ಯ ಮತ್ತು ಡಿ.ಆರ್.ನಾಗರಾಜ್. ಮೇಷ್ಟ್ರಂತೂ ಎಂದಿನಂತೆ 'ಕನ್ನಡದಲ್ಲೇ' ಬರಲೆಂದರು. ಅಕ್ಷರ ಪ್ರಕಾಶನದಿಂದ ಅದನ್ನು ಪ್ರಕಟಿಸಲು ಕೆ.ವಿ.ಸುಬ್ಬಣ್ಣ ಮುಂದೆ ಬಂದರು. ಬಿಡುಗಡೆಯ ಸಂದರ್ಭದ ಮಾತುಗಳಲ್ಲೂ ಗಾಂಧೀಜೀ–ಅಂಬೇಡ್ಕರ್ ನಡುವಿನ ವಾಗ್ವಾದಗಳಲ್ಲಿ ಗಾಂಧೀಜಿ ಕುರಿತು ನಾನು ಬಳಸಿದ ಒಂದು ವಾಕ್ಯ "ಅಂಬೇಡ್ಕರ್, ಗಾಂಧೀಜಿಯನ್ನು ತರಾಟೆಗೆ ತೆಗೆದುಕೊಂಡರು" ಎಂಬ ಬಗ್ಗೆ ಮೇಷ್ಟ್ರ ಆಕ್ಷೇಪ. 'ತರಾಟೆ' ಪದವನ್ನು ಗಾಂಧೀಜೀ ಬಗ್ಗೆ ಬಳಸುವುದು ಎಷ್ಟು ಸರಿ? ಅದು ಅವರ ಟೀಕೆ. ಆದರೆ ಅಂಬೇಡ್ಕರ್, ಗಾಂಧೀಜೀ ಬಗೆಗಿನ ತಮ್ಮ ಅಸಮಾಧಾನ ಹೊರ ಹಾಕುವ ಸನ್ನಿವೇಶಗಳಲ್ಲಿ ಮಾಡಿರುವ ಕಟುಟೀಕೆಗಳನ್ನು ಸಭೆಯನಂತರ ಅವರ ಗಮನಕ್ಕೆ ತಂದೆ. ಈ ಬಿಡುಗಡೆ ಕಾರ್ಯಕ್ರಮವು ನನ್ನ ಪಾಲಿಗಂತೂ ಮರೆಯಲಾಗದ ಒಂದು ನೆನಪು.

ಅದಕ್ಕೂ ಮುಂಚೆ ಕೊಟ್ಟಾಯಂನಲ್ಲಿದ್ದಾಗ ಮೇಷ್ಟ್ರು ಒಂದು ಅಪೂರ್ವ 'ಸಂವಾದ' ಕಾರ್ಯಕ್ರಮ ಹಮ್ಮಿಕೊಂಡರು. ದೇಶದ ಹೆಸರಾಂತ ಚಿಂತಕರನ್ನು ಒಟ್ಟಿಗೆ ತಂದ

ಕಾರ್ಯಕ್ರಮ ಅದು. ಇದು 1988ರ ಸೆಪ್ಟಂಬರ್‌ನಲ್ಲಿ ಇರಬೇಕು. ಅಲ್ಲಿ ನೆರೆದವರಲ್ಲಿ ಹಲವರು ಜ್ಞಾನಪೀಠಿಗಳು. ವಿದ್ಯಾನಿವಾಸ್ ಮಿಶ್ರಾ, ಅಸ್ಸಾಮಿ ಲೇಖಕ ಬೀರೇಂದ್ರ ಕುಮಾರ್ ಭಟ್ಟಾಚಾರ್ಯ, ಎಂ.ಗೋವಿಂದನ್, ಎಂ.ಟಿ.ವಾಸುದೇವನಾಯರ್, ವೈಕಂ ಮಹಮ್ಮದ್ ಬಷೀರ್, ಅಶೋಕ್ ವಾಜಪೇಯಿ, ರಾಮಚಂದ್ರ ಗಾಂಧಿ, ನಿರ್ಮಲ್ ವರ್ಮ, ಅಯ್ಯಪ್ಪ ಪಣಿಕ್ಕರ್, ಕಮಲಾದಾಸ್, ಸಚ್ಚಿದಾನಂದನ್, ಅಶೋಕ ಮಿತ್ರನ್, ಡಿ.ಆರ್.ನಾಗರಾಜ್, ಅಗ್ರಹಾರ ಕೃಷ್ಣಮೂರ್ತಿ ಇತ್ಯಾದಿ. ಕುತೂಹಲದ ವಿಚಾರವೆಂದರೆ ಎಲ್ಲರೂ ಸಾಹಿತ್ಯ ಕ್ಷೇತ್ರದ ದಿಗ್ಗಜರೇ. ನಾನೊಬ್ಬನೇ ಸಮಾಜ ವಿಜ್ಞಾನದವನು. ಮಾತನಾಡುವವರೆಲ್ಲಾ ಪುರಾಣ, ಉಪಮೆ, ರೂಪಕ, ಭಾಷೆಗಳಲ್ಲಿ ಮಾತನಾಡುವವರೇ. ಅದ್ಭುತ ಪಾಂಡಿತ್ಯ. ಅದು ನಡೆದದ್ದು ಪೂರ್ತಾ ಒಂದು ವಾರ. ನಾನು ನಾಲ್ಕುದಿನವಿರುತ್ತೇನೆಂದು ಅಲ್ಲಿ ಕಳೆದೆ. ನಾನು ಹೋದ ಎರಡನೆಯ ದಿನ ಮೇಷ್ಟ್ರು ನನ್ನ ರೂಮಿಗೆ ಬಂದು "ನೀನು ಇವತ್ತು ನಿನ್ನ ವಿಚಾರ ಮಂಡಿಸಬೇಕು" ಎಂದರು. ಸಂವಾದದ ವಿಷಯ 'Tradition And Modernity: The True and the False' (ಸಂಪ್ರದಾಯ ಮತ್ತು ಆಧುನಿಕತೆ: ನಿಜ ಮತ್ತು ಸುಳ್ಳು). ನಾನು ಆರಿಸಿಕೊಂಡದ್ದು ತಿಲಕ್, ಸಾವರ್ಕರ್ ಮತ್ತು ಗಾಂಧಿ. ನಮ್ಮ ಆಧುನಿಕ ಕಾಲದ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಹೇಗೆ ಸಂಪ್ರದಾಯಿಕ ಸಂಕೇತಗಳನ್ನು ಇವರು ದುಡಿಸಿಕೊಳ್ಳಲು ಪ್ರಯತ್ನಿಸಿದರು ಎಂಬ ಬಗ್ಗೆ ಸುಮಾರು ಮುಕ್ಕಾಲು ಘಂಟೆ ನನ್ನ ಅಭಿಪ್ರಾಯ ಮಂಡಿಸಿದೆ. ತಿಲಕ್-ಸಾವರ್ಕರ್ ಅವರು ಸಂಪ್ರದಾಯಿಕ, ಪೌರಾಣಿಕ-ಐತಿಹಾಸಿಕ ಸಂಕೇತಗಳನ್ನು ಸ್ವಾತಂತ್ರ ಹೋರಾಟದ ಸಂದರ್ಭದಲ್ಲಿ ದುಡಿಸಿಕೊಂಡ ರೀತಿಗಳನ್ನು ವಿವರಿಸುತ್ತಾ ಅವು ಹೇಗೆ ಹಿಂದುಳಿದ ಶೂದ್ರ-ದಲಿತ-ಮಹಿಳಾ ಸಮುದಾಯಗಳನ್ನು ಹೋರಾಟದ ತೆಕ್ಕೆಗೆ ಸೆಳೆಯಲು ಸಮರ್ಥವಾಗಲಿಲ್ಲ. ಅಷ್ಟಲ್ಲದೆ ಈ ಸಮುದಾಯಗಳಲ್ಲಿ ಹೋರಾಟದ ತಾತ್ವಿಕತೆಯ ಬಗ್ಗೆ ಅನುಮಾನ ಮೂಡಿಸಿದವು. ಯಾಕೆಂದರೆ ಅವರು ಆ ಪರಿಕರಗಳನ್ನು ಅರ್ಥೈಸಿದ - ಮಂಡಿಸಿದ ರೀತಿ ಹೋರಾಟ ಕೇವಲ ಮೇಲ್ವರ್ಗದ ವಿದ್ಯಾವಂತರಿಗೆ ಮಾತ್ರ ಪ್ರಿಯವಾಗುವಂತಿದ್ದು, ಈ ಮೇಲ್ವರ್ಗವೇ ದೈನಂದಿನ ಜೀವನದಲ್ಲಿ ಇತರರನ್ನು ಕೀಳಾಗಿ ಕಾಣುತ್ತಿದ್ದುದರಿಂದ, ಈ ಇತರರು ಆಕರ್ಷಿತರಾಗದೇ ಹೋದರು. ತಿಲಕರು, ಬಹುಸಂಖ್ಯಾತ ಹಿಂದುಳಿದ ಶೂದ್ರ-ದಲಿತ-ಮಹಿಳಾ ಸಮುದಾಯಗಳ ವಿಚಾರ ಬಂದಾಗ ಅವರಲ್ಲಿ ಉತ್ಸಾಹ ತುಂಬುವರೀತಿ ವರ್ತಿಸದೇ ಆಗಾಗ ಅವರ ಸಂಘಟನೆ, ಚಳವಳಿಗಳ ಬಗ್ಗೆ ನಕಾರಾತ್ಮಕ ನಿಲುವು ತಾಳಿದ್ದು, ಬರೆದದ್ದು ಕುರಿತ ವಿವರಗಳನ್ನು ಮಂಡಿಸಿದೆ. ಅಸ್ಪೃಶ್ಯತಾನಿವಾರಣೆ, ವಿಧವಾ ವಿವಾಹ, ಬಾಲ್ಯ ವಿವಾಹ ಕುರಿತ ಅವರ ನೇತ್ಯಾತ್ಮಕ ನಿಲುವು, ಇವೆಲ್ಲಾ ಸ್ವಾತಂತ್ರ ಹೋರಾಟದ ನೆಲೆ ವಿಸ್ತಾರವಾಗಲು ಸಹಾಯಕವಾಗಿರಲಿಲ್ಲ. ಹಾಗೆ ನೋಡಿದರೆ ಬ್ರಿಟಿಷರಿಗೆ, ಭಾರತೀಯರನ್ನು ಒಡೆದು ಆಳುವ ಸಾಮಗ್ರಿಯಾಗಿ ಬಳಕೆಯಾಯಿತು. ಅದು ವಾಲೆಂಟೈನ್ ಚಿರೋಲ್‌ನಂಥ ಒಬ್ಬ ಭಾರತ ವಿರೋಧಿ ಬರಹಗಾರ ಭಾರತ ಸ್ವಾತಂತ್ರ ಚಳವಳಿಯನ್ನು 'ಬ್ರಾಹ್ಮಣರ ಪಿತೂರಿ' ಎಂದು ಬರೆಯಲು ಅವಕಾಶಮಾಡಿಕೊಟ್ಟಿತು.

ಪರ್ಯಾಯವಾಗಿ ಗಾಂಧೀಜಿ ಸಂಪ್ರದಾಯ, ಧರ್ಮವನ್ನು ಅತ್ಯಂತ ಇಹ್ಯಾತ್ಮಕವಾಗಿ, ಸೃಜನಾತ್ಮಕವಾಗಿ ಅರ್ಥೈಸಿ, ಸಾಮರಸ್ಯ-ಸಮಾನತೆಗಳನ್ನು ಎತ್ತಿ ಹಿಡಿದ ಬಗೆಯನ್ನು

ವಿವರಿಸಿದೆ. 'ಗೀತೆ'ಯನ್ನು ಗಾಂಧಿ ಪರಿಭಾವಿಸಿದ ರೀತಿ, ಅಸ್ಪೃಶ್ಯತೆಯನ್ನು ಖಂಡಿಸಿದ ಕ್ರಮ, ಹಿಂದುಳಿದವರಿಗಾಗಿ ಧಾರ್ಮಿಕ ಅಲ್ಪ ಸಂಖ್ಯಾತರಿಗಾಗಿ ಮೇಲ್ವರ್ಗ ಮತ್ತು ಶ್ರೀಮಂತರು ಸ್ವಾರ್ಥವನ್ನು ತೆರೆದು ಅವರು ಕೇಳಿದ್ದನ್ನು ಕೊಟ್ಟರೆ ನಷ್ಟವೇನಿಲ್ಲವೆಂದು ಪ್ರತಿಪಾದಿಸಿ, ಮಹಿಳೆಯರನ್ನು ಒಳಗೊಳ್ಳಲು ಅವರಿಗೆ ಸಾಧ್ಯವಾಗುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡದ್ದು, ಅವರ ರಾಮರಾಜ್ಯ - ದರಿದ್ರ ನಾರಾಯಣ ಪರಿಕಲ್ಪನೆಗಳು ಗ್ರಾಮ -ಗೃಹ ಕೈಗಾರಿಕೆಗಳಿಗೆ ಕೊಟ್ಟ ಪ್ರಾಧಾನ್ಯತೆ, ಗೋಸಂರಕ್ಷಣೆ ಬಗ್ಗೆ ಅವರು ತಳೆದ ವೈಚಾರಿಕ -ಧಾರ್ಮಿಕ ನಿಲುವು ಹೇಗೆ ಬಹುಜನ ಸಮುದಾಯವನ್ನು ರಾಷ್ಟ್ರ ಕಟ್ಟುವ ಕ್ರಿಯೆಗೆ ಕ್ರಮೇಣ ಆಕರ್ಷಿಸಿತು ಮತ್ತು ಚಳವಳಿಯನ್ನು ನಿಜ ಅರ್ಥದಲ್ಲಿ ರಾಷ್ಟ್ರೀಯ ಚಳವಳಿಯನ್ನಾಗಿಸಿತೆಂದು ವಿವರಿಸಿದೆ. ಮತೀಯ ಮುಖಿಯಾಗಿದ್ದ ಭಾರತೀಯ ಸಮಾಜ -ರಾಜಕಾರಣ, ಸಾಮರಸ್ಯ ಮತ್ತು ಸಮಾಜಮುಖಿ ಹಾಗೆಯೇ ರಾಷ್ಟ್ರೀಯ ಮುಖಿಯಾಯಿತೆಂದು ವಿಶ್ಲೇಷಿಸಿದೆ. ನಾನು ಕೊಟ್ಟ ವಿವರಗಳು ಬಹುತೇಕರಿಗೆ ಹೊಸತಾಗಿದ್ದವು. ಆ ಬಗ್ಗೆ ವಿವರಣೆಗಳನ್ನು ಪಡೆದರು.

ನಾನು ಎಷ್ಟು ಸಮರ್ಥವಾಗಿ ಮಂಡಿಸಿದೆನೋ ಗೊತ್ತಿಲ್ಲ. ಆದರೆ ಎಲ್ಲರೂ ಇಷ್ಟಪಟ್ಟಂತಿತ್ತು. ಮೇಷ್ಟ್ರು ಈ ವಿಚಾರವನ್ನು ವಿವರವಾಗಿ ಯೋಚಿಸಿ ಬರೆಯಲು ಹೇಳಿದರು. ಅನಂತರ ಮದ್ರಾಸ್ ವಿಶ್ವವಿದ್ಯಾಲಯದ ಆಹ್ವಾನದ ಮೇರೆಗೆ ಇದೇ ವಿಚಾರವಾಗಿ 'ವಿಲಿಯಂ ಮೆಯರ್' ಹೆಸರಿನ ಎರಡು ದತ್ತಿ ಉಪನ್ಯಾಸಗಳನ್ನು ಕೊಟ್ಟೆ. ಒಂದು ದೀರ್ಘವಾದ ಪ್ರಬಂಧವನ್ನು ಬರೆದನಾದರೂ ಅದನ್ನು ಇನ್ನೂ ಹಿಗ್ಗಿಸುವ ಅವಶ್ಯಕತೆ ಇದ್ದು ಪ್ರಕಟಿಸಿಲ್ಲ. ಆದರೆ ಅದನ್ನು ಮೇಷ್ಟ್ರ ಹತ್ತಿರ ಚರ್ಚಿಸಿದ ಸಮಾಧಾನವಿದೆ.

ನನ್ನ ಎರಡನೆಯ ಪುಸ್ತಕ ವಸಾಹತುಶಾಹಿ- ರಾಷ್ಟ್ರೀಯತೆಯನ್ನು ಕರಡಿನಲ್ಲೇ ಓದಿ ಇಷ್ಟಪಟ್ಟರು. ಅದು ತುರ್ತಾಗಿ ಪ್ರಕಟವಾಗಬೇಕೆಂದು ಪ್ರತಿಯನ್ನು ತೆಗೆದುಕೊಂಡರು. ಎರಡು ತಿಂಗಳಲ್ಲಿ 'Wiley Eastren' ಎಂಬ ಪ್ರಕಾಶನದ ಮುಖ್ಯಸ್ಥರಿಂದ ಅದನ್ನು ಪ್ರಕಟಣೆಗೆ ಒಪ್ಪಿರುವ ಪತ್ರ ಮತ್ತು ಕರಾರು ಪತ್ರಗಳೆರಡೂ ಬಂದವು. ಮೇಷ್ಟ್ರಿಗೆ ನೀವೇ ಮುನ್ನುಡಿ ಬರೆಯಬೇಕೆಂದಾಗ ಅವರು ಹೇಳಿದ್ದು ಗಂಭೀರ ಚಿಂತನೆಗೆ ಹಚ್ಚುವಂತಿದೆ. ಚರಿತ್ರೆಯನ್ನು ಪರಿಭಾವಿಸುವ, ಬರೆಯುವ ಕ್ರಮ ಸಾಹಿತ್ಯಕೃತಿಯೊಂದನ್ನು ಪರಿಭಾವಿಸುವ, ಮಂಡಿಸುವ ಕ್ರಮಕ್ಕೆ ತದ್ವಿರುದ್ಧವಾದದ್ದು. ಅವುಗಳ ವಿಧಾನ(Methodology)ಗಳೇ ಭಿನ್ನ ರೀತಿಯವು. ಹೀಗಿದ್ದಾಗ ಚರಿತ್ರೆ ಸಂಶೋಧನ ಕೃತಿಯೊಂದನ್ನು ಒಳಹೊಕ್ಕು ಅದನ್ನು ಪರಿಚಯಿಸುವ ಕೆಲಸ ತಾವು ಮಾಡುವುದೇ? ಇದು ಅವರ ಪ್ರಶ್ನೆ (ಮುನ್ನುಡಿಯನ್ನು ಅವರು ಬರೆದರು. ಅದು ಬೇರೆ ಮಾತು). ಆದರೆ ನೂರಾರು ಚರಿತ್ರೆಯ ಪುಸ್ತಕಗಳನ್ನು ಓದಿ, ಅರಗಿಸಿಕೊಂಡು ಅದರಿಂದ ಪ್ರಭಾವಿತರಾಗಿ ಅದ್ಭುತ ಬರಹಗಳನ್ನು ಸಾಧ್ಯವಾಗಿಸಿಕೊಂಡ ಮೇಷ್ಟ್ರಿಗೆ ಅದು ಕಷ್ಟದ ಕೆಲಸವೇನಾಗಿರಲಿಲ್ಲ. ಹಾಗೆ ನೋಡಿದರೆ, ಟಾಯ್ನಬಿ, ವಿಲ್‌ಡ್ಯುರಾಂಟ್, ರೋಮಿಲಾ ಥಾಪರ್, ಹೀಗೆ ಹಲವು ಮೇಧಾವಿ ಇತಿಹಾಸಕಾರರನ್ನು ಓದಿ ಜೀರ್ಣಿಸಿಕೊಂಡಿದ್ದ ಅವರು ಮಿಂಚಿನ ಒಳನೋಟಗಳನ್ನು ಕೊಟ್ಟವರು. ಅವರು 1960ರ ದಶಕದಲ್ಲಿ ಬರ್ಮಿಂಗ್‌ಹ್ಯಾಮ್‌ನಲ್ಲಿ ಸಂಶೋಧನೆಗಾಗಿ ಆಯ್ಕೆ ಮಾಡಿಕೊಂಡಿದ್ದು 'ಮುವತ್ತರ ದಶಕದ ರಾಜಕೀಯ ಮತ್ತು ಸಾಹಿತ್ಯ'. ಆ ಕುರಿತ ಅವರ ಬರಹಗಳನ್ನು

ಓದುತ್ತಿದ್ದರೆ ಇತಿಹಾಸ - ಸಾಹಿತ್ಯಗಳು ಮೇಳೈಸಿರುವುದು ಸ್ಪಷ್ಟವಾಗಿದೆ. ಮಾರ್ಕ್ಸ್, ಲೆನಿನ್, ಅಪ್ಟನ್ ಸಿಂಕ್ಲೇರ್, ಸಿಮನ್ ದಿ ಬುವಾ, ಹೋಗರ್ಟ್, ಷಾ, ಹೀಗೆ ಎಲ್ಲ ಚರಿತ್ರೆ ಸೃಷ್ಟಿಸಿದವರನ್ನು, ಅವರ ಕೃತಿಗಳನ್ನು ಅರಗಿಸಿಕೊಳ್ಳುವ, ಅವರದೇ ಒಂದು ಪದ ಬಳಸುವುದಾದರೆ– 'ಜೀರ್ಣಾಗ್ನಿ' ಅವರಲ್ಲಿತ್ತು. ಪಶ್ಚಿಮದ ನಾಗರಿಕತೆಯನ್ನು ಭಾರತದ ನಾಗರಿಕತೆಯೊಡನೆ ಮುಖಾಮುಖಿಯಾಗಿಸಿ, ಚರ್ಚಿಸಿ, ವಿಶಿಷ್ಟ ಮಿಂಚುಗಳನ್ನು ಹೊಳೆಯಿಸುವ ವ್ಯಕ್ತಿತ್ವ ಅವರದ್ದು. ಪ್ರತಿಭೆಯನ್ನು ಗುರುತಿಸಿ ಆದಷ್ಟು ಅದನ್ನು ಉತ್ತೇಜಿಸುವ, ಪೋಷಿಸುವ ದೊಡ್ಡಗುಣ ಅವರದು. ಜನನಾಯಕರು, ಬುದ್ಧಿಜೀವಿಗಳು, ಬರಹಗಾರರು ಅಪ್ರಿಯ ಸತ್ಯಗಳನ್ನು ಧೈರ್ಯದಿಂದ ಹೇಳಬೇಕಾದ್ದು ಎಂದು ಪ್ರತಿಪಾದಿಸುತ್ತಿದ್ದ ಮೇಷ್ಟ್ರು ನುಡಿದಂತೆ ನಡೆದವರು. ಆದ್ದರಿಂದಲೇ ಹಲವಾರು ವಿವಾದಗಳನ್ನು, ಹಲವರ ವಿರೋಧ, ಶತೃತ್ವಗಳನ್ನು ಮೇಲೆಳೆದು ಕೊಂಡರು. ಭಾರತೀಯ ಸಮಾಜವಾದದ ವ್ಯಂಗ್ಯವೆಂದರೆ, ಅವರು ಟೀಕೆ, ವಿರೋಧಗಳನ್ನು ಎದುರಿಸಿದ್ದು, ತಮ್ಮ ಸಮಾಜವಾದಿ ಕಾಮ್ರೇಡ್‌ಗಳಿಂದ. ಅವರನ್ನು ಎಂದೂ ಒಪ್ಪದಿದ್ದ ಮತೀಯ ಬಲಪಂಥೀಯರು - ಅವರ ಕೊನೆಗಾಲದಲ್ಲಿ ಕೆಟ್ಟದಾಗಿ ಕಾಡಿದ್ದನ್ನು ಬಿಟ್ಟರೆ ಆಗೊಮ್ಮೆ ಈಗೊಮ್ಮೆ ಪ್ರತಿಭಟಿಸಿ ಸುಮ್ಮನಾಗುತ್ತಿದ್ದರು. ಆದರೆ ಸೋಷಲಿಸ್ಟರು ಅವರನ್ನು ಟೀಕಿಸಿ ಬೌದ್ಧಿಕವೆಂದುಕೊಂಡ ದಾಳಿಗಳನ್ನು ನಡೆಸಿ ಅವರನ್ನು ಆಗಾಗ ಖಿನ್ನತೆಗೂ ದೂಡಿದ್ದುಂಟು. ಹಾಗೆಂದು ಅನಂತಮೂರ್ತಿ ಯಾವಾಗಲೂ ಸರಿಯೇ ಎಂದು ತಿಳಿಯಬೇಕಾಗಿಲ್ಲ. ವಿಶೇಷವಾಗಿ ಕುವೆಂಪು ಕುರಿತ ಅವರ ಬರಹಗಳು ಉತ್ಸಾಹದಿಂದ ಬರೆದಂಥವೇನಲ್ಲ. ಕುವೆಂಪು ಬಹಳ ಒಳ್ಳೆ ಗದ್ಯ ಬರಹಗಾರರು, ಕಾದಂಬರಿಕಾರರು, ಚಿಂತಕರೆಂದು ಮಾತನಾಡಿ ಬರೆದ ಮೇಷ್ಟ್ರು ಅವರನ್ನು ಅಡಿಗರ, ಬೇಂದ್ರೆಯವರ ಕಾವ್ಯವನ್ನು ಸ್ತುತಿಸಿದಷ್ಟು ಅಲ್ಲವೆನಿಸುತ್ತದೆ. ಬರಹಗಾರರ ಒಕ್ಕೂಟಕ್ಕೆ ಅವರಿಗೆ ಬರದೆ ಹೋದ ಆಹ್ವಾನ ಅವರ ಮೇಲೆ ಯಾವ ಪರಿಣಾಮ ಬೀರಿತೆಂದು ಹೇಳುವುದು ಕಷ್ಟ. ಯಾವುದೇ ಉತ್ಕೃಷ್ಟ ಕೃತಿ ಸೃಷ್ಟಿಸಿದ ವ್ಯಕ್ತಿಯ ಸುತ್ತ ಪ್ರಭಾವಳಿ ನಿರ್ಮಾಣವಾಗುವುದು ಗೊತ್ತಿರುವ ವಿಚಾರ. ಕುವೆಂಪು ಸುತ್ತ ಅದಿತ್ತು ಎನ್ನಲಾಗುತ್ತಿದೆ. ಹಾಗೆಯೇ ಧಾರವಾಡ ಕೇಂದ್ರಿತ ಪೀಠವೂ ಒಂದಿತ್ತು, ಅನಂತಮೂರ್ತಿ ಅವರಿಗೆ ಹತ್ತಿರವೆಂದೂ ಹೇಳಲಾಗಿದೆ. ಅದರ ಒಳಸುಳಿಗಳೇನೇ ಇರಲಿ, ಕುವೆಂಪು ಸುತ್ತ ಬಹುಶಃ ಅವರಿಗೆ ತಿಳಿಯದಂತೆ ನಡೆದ ವಿದ್ಯಮಾನಗಳು ಬಹಳ ಜನರಿಗೆ ಇಷ್ಟವಾಗಲಿಲ್ಲ. ಅದರಲ್ಲಿ ಅನಂತಮೂರ್ತಿಯೂ ಒಬ್ಬರು. ಆದರೆ ಈ ಜನರಲ್ಲಿಯೂ ಹೊಂದಾಣಿಕೆ ಇರಲು ಸಾಧ್ಯವಿರಲಿಲ್ಲ. ಒಮ್ಮೊಮ್ಮೆ ಅನಂತಮೂರ್ತಿಯವರು ಬ್ರಾಹ್ಮಣರಾಗಿದ್ದು, ಅಬ್ರಾಹ್ಮಣ ಚಳವಳಿಗೆ ಹೆಸರಾದ ಮೈಸೂರು-ಕರ್ನಾಟಕಗಳಲ್ಲಿ ಅವರನ್ನು ಪೂರ್ಣ ಅಪ್ಪಿಕೊಳ್ಳಲು ಸಂದರ್ಭ ಪಕ್ವವಿರಲಿಲ್ಲ ಎನಿಸುತ್ತದೆ. ಅದೆಲ್ಲಾ ಸಾಹಿತಿಗಳ ನಡುವಣ ರಾಜಕಾರಣ. ಆದರೂ ಅದು ತಾತ್ವಿಕತೆಗಳನ್ನು ಮೀರಿ ಗುಪ್ತಗಾಮಿನಿಯಾಗಿಯೇ ಹರಿದಂತಿದೆ.

1996ರ ಸಂದರ್ಭ. ನಾನು ಬೆಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಚುನಾವಣೆಗೆ ಸ್ಪರ್ಧಿಸಿದ್ದೆ. ಮೇಷ್ಟ್ರು ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಚುನಾಯಿತರಾಗಿದ್ದರು. ಸ್ನೇಹಿತರು ಯಾರೋ ಅವರಿಗೆ ಸುದ್ದಿ ಮುಟ್ಟಿಸಿದ್ದರು. ಬೆಂಗಳೂರಿಗೆ

ಬಂದಾಗ ಫೋನ್ ಮಾಡಿ ಬಿಡುವಿದ್ದರೆ ಬಾ ಎಂದರು. ಹೋದೆ. ಚುನಾವಣೆಗಳು ಅವರಿಗೆ ಹೊಸದೇನಲ್ಲ. ಅವರೂ ಒಮ್ಮೆ ಮೈಸೂರು ವಿಶ್ವವಿದ್ಯಾಲಯದ ಸಿಂಡಿಕೇಟ್‌ಗೆ ನಿಂತು ಯಶಸ್ಸುಕಾಣದಾಗಿದ್ದರು. ನಾನು ಚುನಾವಣೆಗೆ ಸ್ಪರ್ಧಿಸಿದ್ದು ಮೇಲ್ನೋಟಕ್ಕೆ ಅವರಿಗೆ ಇಷ್ಟವಾದಂತೆ ಕಾಣಲಿಲ್ಲ. ಅದು ಒಂದು Diversion. ಅಕಾಡಿಮಿಕ್ ಕೆಲಸಕ್ಕೆ ಅಡ್ಡಿಯಾಗುತ್ತದಲ್ಲಾ ಎಂದರು. ಆದರೆ ಇವೆಲ್ಲಾ ಇರಬೇಕು. ವಿಶ್ವವಿದ್ಯಾಲಯವೆಂದರೆ ಬರೀ ಓದಿ–ಬರೆದು ಪಾಠಮಾಡುವುದಷ್ಟೇ ಅಲ್ಲ. ಅಲ್ಲಿ ಆಡಳಿತದಲ್ಲಿಯೂ ಪಾಲ್ಗೊಂಡು ಸ್ವಂತದ ಶೈಕ್ಷಣಿಕ ಚಟುವಟಿಕೆಗೆ ಮಾರಕವಾಗದಂತೆ ನಮಗೆ ಸಾಧ್ಯವಾದ ಒಳ್ಳೆಯ ಕೆಲಸವನ್ನು ಮಾಡಬೇಕು. ಆದರೆ ಚುನಾವಣೆಗಳಲ್ಲಿ ನಡೆಯುತ್ತಿದ್ದ ಜಾತಿ ರಾಜಕಾರಣದ ಬಗ್ಗೆ ಎಚ್ಚರವಿರಬೇಕೆಂದು ಸಲಹೆ ಕೊಟ್ಟರು. ಸತತ ಎರಡು ಬಾರಿ ಸ್ಪರ್ಧಿಸಿ ಗೆದ್ದೆ. ಮೊದಲ ಬಾರಿಗೆ ಗೆದ್ದಾಗ ಗೆಳೆಯರು ಒಂದು ಸಂತೋಷ ಕೂಟ ಇಟ್ಟು ಕೊಂಡಾಗ ಬಂದು ಅಭಿನಂದಿಸಿ, ಈ ವಿಚಾರದಲ್ಲಿ ನಾನು ಯಶಸ್ಸು ಕಾಣದ ಕಡೆ ನೀನು ಯಶಸ್ವಿಯಾಗಿರುವೆ, ಒಳ್ಳೆ ಕೆಲಸ ಮಾಡೆಂದು ಹಿತವಚನ ಹೇಳಿದರು. 1992ರಲ್ಲಿ ಮೇಷ್ಟ್ರು ನ್ಯಾಷನಲ್ ಬುಕ್‌ಟ್ರಸ್ಟ್ ಅಧ್ಯಕ್ಷರಾಗಿದ್ದರು. ನನ್ನನ್ನು ಒಂದು ಸಮಿತಿಗೆ ಸದಸ್ಯನನ್ನಾಗಿಸಿದರು. ಹಲವು ಒಳ್ಳೆಯ ಪುಸ್ತಕಗಳನ್ನು ಕನ್ನಡಕ್ಕೆ, ಕನ್ನಡದವುಗಳನ್ನು ಇತರ ಭಾರತೀಯ ಭಾಷೆಗಳಿಗೆ ಅನುವಾದ ಮಾಡುವ ಕೆಲಸಕ್ಕೆ ಒತ್ತಾಸೆಯಾದ ಸಂತೃಪ್ತಿಯಿದೆ. ಆದರೆ ನಾನೇ ಅನುವಾದ ಮಾಡಬೇಕೆಂದು ನನಗೆ ವಹಿಸಿದ ಕೆಲಸ ನಾನು ಮಾಡದಿದ್ದುದು ನನಗೇ ಬೇಸರವಿದೆ. ತಾವು ನಂಬಿದ ರೀತಿಯ ಸಮಾಜವಾದ, ಜಾತ್ಯತೀತತೆ, ವಿಕೇಂದ್ರಿಕರಣ, ಜನತಂತ್ರಗಳ ಬಗ್ಗೆ ವಿರೋಧವಿದ್ದವರಲ್ಲೂ – ಅವರು ಪ್ರತಿಭಾವಂತರಾಗಿದ್ದಲ್ಲಿ– ಅವರು ಸಹನೆಯಿಂದಲೇ ನಡೆದು ಕೊಂಡವರು. ತಾತ್ವಿಕ ವಾಗ್ವದವಂತೂ ಇದ್ದೇ ಇತ್ತು. ಆಧ್ಯಾತ್ಮ ಸೃಜನಶೀಲತೆಯ ಭಾಗವೆಂದೇ ಅವರ ನಂಬಿಕೆ. ನೈತಿಕತೆ ಎಲ್ಲದರಲ್ಲೂ ಹಾಸುಹೊಕ್ಕಾಗಿರಬೇಕು. ಕಾನೂನಿನಲ್ಲೂ ಎಂದೇ ಅವರ ಮತ. ಅಲ್ಲದಿದ್ದರೆ ಅದು ದುಷ್ಪರಿಣಾಮ ಬೀರಿಬಿಡುತ್ತದೆ ಎನ್ನುವ ಎಚ್ಚರ. ಏನಾದರೂ ತಪ್ಪು ಆಗುತ್ತಿದೆ ಎನ್ನಿಸಿದಾಗ ಆಪ್ತರಲ್ಲಿ ಸಮಾಲೋಚಿಸುವುದೂ ಇತ್ತು. ಅಸೂಯೆ–ಮತ್ಸರಗಳು ಎಲ್ಲ ಕ್ಷೇತ್ರಗಳಲ್ಲೂ ಇದ್ದದ್ದೇ. ಜ್ಞಾನಪೀಠ ಮುಂತಾಗಿ ಪ್ರಶಸ್ತಿಗಳು ಬಂದಾಗ ಅಲ್ಲಲ್ಲಿ ಒಡಕು ದನಿಗಳೂ ಇದ್ದವು. ಆದರೆ ಅವುಗಳನ್ನು ಒಪ್ಪಿಕೊಳ್ಳುವಾಗ, ತಮಗಿಂತ ಸಮರ್ಥರು ಹಲವರಿದ್ದಾರೆ. ಅಂಥವರಿಗೆ ಬರಬೇಕಿತ್ತು ಎಂದು ಖಾಸಗಿಯಾಗಿ, ಬಹಿರಂಗವಾಗಿ ಹೇಳುವ ವಿನಯವೂ ಅವರಲ್ಲಿತ್ತು.

* * *

ಅವರಿಗೆ ಜ್ಞಾನಪೀಠ ಬಂದ ಸಂದರ್ಭ. ವಿಶ್ವವಿದ್ಯಾಲಯದ ನಮ್ಮ ವಿಭಾಗದಲ್ಲಿದ್ದೆ. ಆಗ ನಾನು ಮುಖ್ಯಸ್ಥ. ಬೇಸಗೆಯ ರಜೆ. ಇದ್ದಕ್ಕಿದ್ದಂತೆ ಅನಂತಮೂರ್ತಿ ಮೊದಲನೆಯ ಮಹಡಿಯಲ್ಲಿದ್ದ ನಮ್ಮ ರೂಮಿಗೆ ಬಂದರು. ನಮ್ಮ ವಿಭಾಗದ ಕಸಗುಡಿಸುವವರು ಹದಿನೈದು ದಿನದಿಂದ ರಜೆಯಲ್ಲಿದ್ದರು. ಪರ್ಯಾಯವಾಗಿ ಬೇರೆ ವಿಭಾಗದ ಇನ್ನೊಬ್ಬರಿಗೆ ಆ ಕೆಲಸ ವಹಿಸಿತ್ತಾದರೂ ಅವರೂ ರಜೆಹಾಕಿ ಇಡೀ ಕಟ್ಟಡದಲ್ಲಿ ಅಲ್ಲಲ್ಲಿ ಕಸ, ಧೂಳು ಕಾಣುತ್ತಿತ್ತು. ನನ್ನನ್ನು ಕರೆದುಕೊಂಡು ಇಡೀ ವಿಭಾಗದ ಒಂದು ಸುತ್ತು ಬಂದು ನನ್ನ

ರೂಮಿನಲ್ಲಿ ಕುಳಿತರು. ಕಾಫಿ ಕುಡಿದು, ವಾಪಸು ಹೋಗುತ್ತಾ 'It is symbolic of the decay that has set into our university system' ಅಂದರು. ಅವರು ಗಲೀಜನ್ನು ಗಮನಿಸಿ ಮಾತ್ರ ಆ ಮಾತನ್ನು ಆಡಿರದೆ ಅದು ಒಟ್ಟಾರೆ ನಮ್ಮ ವಿಶ್ವವಿದ್ಯಾಲಯಗಳ ಅವನತಿಗೆ ಸಂಕೇತವಾಗಿದೆ ಎಂದು ಕೊಂಡು, ಅವರನ್ನು ಕೇಳಿಯೂಬಿಟ್ಟೆ. ನನ್ನ ಮನಸ್ಸಿನಲ್ಲಿದ್ದುದೂ ಅದೇ ಎಂದರು. ಆಮೇಲೆ ಹಿಂದೆ ಯೂನಿವರ್ಸಿಟಿಗಳಲ್ಲಿದ್ದ ವಾತಾವರಣ, ಸ್ವಾತಂತ್ರ, ಸಾಮರಸ್ಯಗಳ ಬಗ್ಗೆ ದೃಷ್ಟಾಂತಗಳಿಂದ ವಿವರಿಸಿ, ಇವತ್ತಿನ ಸ್ಥಿತಿಯ ಬಗ್ಗೆ ಮರುಕ ಪಟ್ಟರು. ಸಂಬಂಧಪಟ್ಟ ಸಚಿವರು, ರಾಜ್ಯಪಾಲರು ಮುಂತಾದವರಿಗೆ ಆಗಾಗ ಅವರು ಪತ್ರ ಬರೆಯುತ್ತಿದ್ದುದೂ ಉಂಟು.

ಒಮ್ಮೆ ನಾನು Official ಆಗಿ ಅವರ ಸಂಪರ್ಕಕ್ಕೆ ಬರಬೇಕದ ಸಂದರ್ಭವೂ ಬಂತು. ಹೊಸದಾಗಿ 2009ರಲ್ಲಿ ಕಲ್ಬುರ್ಗಿಯಲ್ಲಿ ಪ್ರಾರಂಭವಾದ ಕೇಂದ್ರೀಯ ವಿಶ್ವವಿದ್ಯಾಲಯದಲ್ಲಿ ನಾನು ಸಮಕುಲಪತಿಯಾಗಿ ಹೋದೆ. ರಾಜ್ಯದ ಮತ್ತು ಕೇಂದ್ರೀಯ ವಿಶ್ವವಿದ್ಯಾಲಯದಗಳ ಕುಲಪತಿ ಸ್ಥಾನಗಳಿಗೆ ಹಲವಾರು ಬಾರಿ ಅಂತಿಮಪಟ್ಟಿಗಳಲ್ಲಿ ನನ್ನ ಹೆಸರಿದ್ದು ನಾನು ಕುಲಪತಿಯಾಗಿ ನೇಮಕಗೊಳ್ಳದಿದ್ದುದರಿಂದ ನಾನು ಬೇಸರಪಟ್ಟು ಕಲಬುರ್ಗಿಗೆ ಹೋದೆನೆಂದು ಮೇಷ್ಟ್ರು ಅಸಮಧಾನ ಪಟ್ಟು ಫೋನ್ ಮಾಡಿದರು. ಭೇಟಿಯಾಗಲು ಹೇಳಿದರು. ಬೆಂಗಳೂರಿನ ಅವರ ಮನೆಯಲ್ಲಿ ಭೇಟಿಯಾದೆ. ನಾನು ಹೋಗಲು ಕಾರಣ ಅದಲ್ಲವೆಂದು ನಾನು ಮನವರಿಕೆ ಮಾಡಿಕೊಡಲು ಪ್ರಯತ್ನಿಸಿದೆ. ಒಪ್ಪಿದರೋ, ಬಿಟ್ಟರೋ ಗೊತ್ತಾಗಲಿಲ್ಲ. ಸಾಂಪ್ರದಾಯಿಕ ಕೋರ್ಸುಗಳನ್ನು ಪ್ರಾರಂಭಿಸಬೇಡಿ. ಇಂಟಿಗ್ರೇಟೆಡ್ ಕೋರ್ಸ್‌ಗಳನ್ನು ಮಾಡಿ. ಆದಷ್ಟು ಜ್ಞಾನದ ಸಮಗ್ರತೆಗೆ ಆದ್ಯತೆಕೊಡಿ ಎಂದು ಸಲಹೆ ಕೊಟ್ಟರು. ಇಲ್ಲೂ ಮೇಷ್ಟ್ರದು ಸಮನ್ವಯದ ಹಾದಿಯೇ. ಒಳಗೊಳ್ಳಬೇಕಾದ (integrative) ಜ್ಞಾನ ಪ್ರಸಾರವೇ. ಎಂದಿನಂತೆ ಮಾನವಿಕ-ಸಮಾಜ ವಿಜ್ಞಾನ ಸಂಬಂಧಿ ವಿಚಾರಗಳಿಗೆ ಆದ್ಯತೆಯಿರಲಿ ಎಂದೂ ಸೂಚಿಸಿದರು. 2012ರ ಜೂನ್ ನಿಂದ ಪ್ರಭಾರ ಕುಲಪತಿಯಾದೆ. ಆಗಸ್ಟ್‌ನಲ್ಲಿ ಅನಂತಮೂರ್ತಿಯವರನ್ನು ನಮ್ಮ ವಿಶ್ವವಿದ್ಯಾಲಯದ ಕುಲಾಧಿಪತಿಯಾಗಿ, ರಾಷ್ಟ್ರದ ಅಧ್ಯಕ್ಷರು ನೇಮಿಸಿದರು. ಆದೇಶ ಬಂದಿದ್ದು ಮೊದಲು ವಿಶ್ವವಿದ್ಯಾಲಯಕ್ಕೆ. ಅದು ನಮ್ಮ ಕುಲಸಚಿವರ e-mail ಗೆ ಬಂದಿತ್ತು. ಮೇಷ್ಟ್ರಿಗೆ ನಾನು ಪರಿಚಯವಿದ್ದುದು ತಿಳಿದಿದ್ದ ನಮ್ಮ ಕುಲಸಚಿವರು ಆದೇಶದ e-mail ಪ್ರತಿ ತೆಗೆದುಕೊಂಡು ಬಂದು ವಿಚಾರ [illegible]ಸಿದರು. ನಾನು ನನ್ನ e-mail box ನೋಡಿದರೆ ಅದು ಖಾತ್ರಿಯಾಗಿತ್ತು. ಕೂಡಲೇ ನಾನು ಮೇಷ್ಟ್ರನ್ನು ಸಂಪರ್ಕಿಸಿ ನನ್ನ ಸಂತೋಷವನ್ನು ವ್ಯಕ್ತಪಡಿಸುತ್ತಾ, ತಮ್ಮ ನೇಮಕ ವಿಶ್ವವಿದ್ಯಾಲಯದ ಸೌಭಾಗ್ಯವೆಂದು ತಿಳಿಸಿದೆ. ಮೇಷ್ಟ್ರಿಗೆ ಆಶ್ಚರ್ಯ. 'ನಿಜವೇನಯ್ಯಾ?' ಅಂದರು. ನಾನು ಕೂಡಲೇ e-mail ನ್ನು ಅವರಿಗೆ forward ಮಾಡಿದೆ. ನಮ್ಮಿಂದ ಮೇಷ್ಟ್ರ e-mail ವಿಳಾಸ ಪಡೆದುಕೊಂಡ ಕೇಂದ್ರ ಮಾನವ ಸಂಪನ್ಮೂಲ ಸಚಿವಾಲಯವೂ ಅವರಿಗೆ e-mail ಕಳುಹಿಸಿತು. ಹೀಗೆ ನಾನು ಸಮ ಕುಲಪತಿ ಕೆಲಸ ಮಾಡಿದಷ್ಟು ಕಾಲವೂ ಮೇಷ್ಟ್ರ ಸಲಹೆ-ಸೂಚನೆಗಳನ್ನು ಪಡೆಯುತ್ತಿದ್ದೆ. ಆಗಲೂ ಅವರು ಹೊಸದಾಗಿ ಏನು ಓದಿದೆ-ಬರೆದೆ ಎನ್ನುತ್ತಲೇ, ಈ ಆಡಳಿತ ನಮ್ಮ ಶೈಕ್ಷಣಿಕ ಕೆಲಸಕ್ಕೆ ತೊಂದರೆ ಮಾಡುತ್ತದೆಂದು ತಮ್ಮ ಹಿಂದಿನ ಅನುಭವಗಳನ್ನು ನನಗು

ಮಾಡಿಕೊಳ್ಳುತ್ತಿದ್ದರು. ಅದಕ್ಕೆ ಮುಂಚೆ ಅಂದರೆ ಅವರು ಕುಲಾಧಿಪತಿಯಾಗುವ ಮುಂಚೆ ಅವರಿಗೆ ನಮ್ಮ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟು ಸಂದಿತ್ತು. ಮೊದಲು ಅವರ ಒಪ್ಪಿಗೆ ಪಡೆದೇ ಆ ಕೆಲಸ ನಡೆದಿತ್ತು.

ನಾನು ನಿವೃತ್ತಿ ಪಡೆದು ವಾಪಸು ಬಂದ ನಂತರವೂ ಆಗಾಗ ಇ-ಮೇಲ್ ಅಥವಾ ಎಸ್.ಎಂ.ಎಸ್ ಗಳನ್ನು ಬರೆಯುತ್ತಿದ್ದರು. ಅಗತ್ಯವೆನಿಸಿದಾಗ ಕರೆಸಿಕೊಳ್ಳುತ್ತಿದ್ದರು. ಅನಾರೋಗ್ಯದಿಂದ ಬಳಲುತ್ತಿದ್ದರೂ ಚಟುವಟಿಕೆಯಿಂದಿದ್ದ ಮೇಷ್ಟ್ರು, ಕೆಲವು ವಿಚಾರಗಳ ಬಗ್ಗೆ ಚರ್ಚಿಸಲೇ ಬೇಕಾದಾಗ ಫೋನ್ ಮಾಡಿ ಇಂಥಲ್ಲಿಗೆ ಬಾ ಎಂದು ಕರೆದು ಮಾತನಾಡಿದ್ದರು. ಕೊನೆಯ ಸಲ ನಾನು ಅವರ ಜೊತೆ ಕಾಲ ಕಳೆದದ್ದು ಮಣಿಪಾಲ್ ಆಸ್ಪತ್ರೆಯಲ್ಲಿ ಈ ವರ್ಷದ ಮಾರ್ಚ್/ಏಪ್ರಿಲ್‌ನಲ್ಲಿ. ಡಯಾಲಿಸಿಸ್ ನಡೆದಿತ್ತು. ಹತ್ತಿರ ಕರೆದು ಕೈ ಹಿಡಿದು ಕೂರಿಸಿಕೊಂಡು ಮಾತನಾಡಿದ್ದು ಸರ್.ಎಂ.ವಿಶ್ವೇಶ್ವರಯ್ಯ, ನಾಲ್ವಡಿ ಕೃಷ್ಣರಾಜ ಒಡೆಯರ್ ನಡುವೆ ಮೀಸಲಾತಿ ವಿಚಾರವಾಗಿ ನಡೆದ ತಿಕ್ಕಾಟ, ಬಾಲಗಂಗಾಧರ ತಿಲಕ್ ಅವರು ಜಾತಿ, ಅಸ್ಪೃಶ್ಯತೆ ಬಗ್ಗೆ ತಳೆದ ನಿಲುವುಗಳ ಬಗ್ಗೆ. ಗಾಂಧೀಜಿಯವರ ಗ್ರಾಮಸ್ವರಾಜ್ಯ, ಗ್ರಾಮ ಕೈಗಾರಿಕಾ ಸಂಘದ ಬಗ್ಗೆ. ಇಲ್ಲಿ ಇನ್ನೊಂದು ವಿವರವನ್ನು ಕೊಡುವುದು ಅಗತ್ಯವೆನಿಸುತ್ತದೆ. ಹಳೇ ಮೈಸೂರು ಭಾಗದಲ್ಲಿ ಹುಟ್ಟಿ, ಬೆಳೆದು, ಓದಿ ಆ ಪರಿಸರದಲ್ಲೇ ತಮ್ಮ ಪ್ರಜ್ಞೆರೂಪಿಸಿಕೊಂಡವರು ಮೇಷ್ಟ್ರು. ಅವರು ಹೆಚ್ಚುಕಾಲ ಕಳೆದ ಮೈಸೂರು ಬಹಳ ಕಾಲ ರಾಜ್ಯದ ಅಧಿಕಾರ ಕೇಂದ್ರವೂ ಸಾಂಸ್ಕೃತಿಕ ಕೇಂದ್ರವೂ ಆಗಿತ್ತು, ಆಗಿದೆ. ಮೀಸಲಾತಿ ಕುರಿತ ಮೊದಲ ಕುರುಹುಗಳು ಕಾಣಿಸಿದ್ದು ಅಲ್ಲಿಯೇ. ಆ ಬಗ್ಗೆ ಸಂಶೋಧನೆ ಮಾಡಿ ಬರೆದ ಮೊದಲಿಗರಲ್ಲಿ ನಾನೂ ಒಬ್ಬ. ಮೀಸಲಾತಿ ವಿಚಾರದಲ್ಲಿ ದಿವಾನ್ ವಿಶ್ವೇಶ್ವರಯ್ಯನವರದು ಬಹಳ ಸಂಕೀರ್ಣ ನಿಲುವು. ಹಿಂದುಳಿದ ಭಾರತ, ಮೈಸೂರುಗಳಲ್ಲಿ ಅರ್ಹತೆ ದಕ್ಷತೆಗೆ ಪ್ರಾಶಸ್ತ್ಯವಿರಬೇಕು. ಇಲ್ಲವಾದರೆ ಪ್ರಗತಿ ಕಷ್ಟಸಾಧ್ಯ. ಅರ್ಹತೆ-ದಕ್ಷತೆಯಿಲ್ಲದ ಆಡಳಿತ ಪ್ರಗತಿಯನ್ನು ಕುಂಠಿತಗೊಳಿಸುತ್ತದೆ ಎಂಬ ನಿಲುವು ಹಲವರದ್ದು. ವಿಶ್ವೇಶ್ವರಯ್ಯನವರು ಈ ನಿಲುವಿನ ಪ್ರತಿಪಾದಕರು. ಆದರೆ ಅಂದಿನ ಭಾರತೀಯ ಪರಿಸರದಲ್ಲಿ ಬಹುಸಂಖ್ಯಾತ ಶೂದ್ರ-ದಲಿತ ಸಮುದಾಯಗಳು ತಮ್ಮನ್ನು ಪಾರಂಪಾರಿಕವಾಗಿ ಅವಕಾಶ ವಂಚಿತರನ್ನಾಗಿಸಲಾಗಿದೆ. ಭಾರತೀಯ ಸಮಾಜ ನಿಜವಾಗಿಯೂ ದಕ್ಷತೆ-ಅರ್ಹತೆ ಪಡೆಯಬೇಕಾದರೆ, ನಮಗೂ ಅವಕಾಶಗಳು ದೊರೆಯಬೇಕು. ವಿದ್ಯೆ - ಸರಕಾರಿ ಹುದ್ದೆ ಮತ್ತಿತರ ಎಲ್ಲ ಅಭಿವೃದ್ಧಿ ಸಾಧ್ಯವಾಗಿಸುವ ಕ್ಷೇತ್ರಗಳಲ್ಲಿ ವಿಶೇಷ ಅವಕಾಶಗಳಿರಬೇಕೆಂದು ಕೇಳಲಾರಂಭಿಸಿದವು. ಮೈಸೂರಿನಲ್ಲಂತೂ ಮಹಾರಾಜರಿಗೆ ಎಚ್ಚೆತ್ತ ಈ ಬಹುಜನ ಸಮುದಾಯದ ಬೇಡಿಕೆ ಈಡೇರಿಸುವುದು ರಾಜಕೀಯ ಅಗತ್ಯವೂ ಆಗಿತ್ತು. ಮಹಾರಾಜರಿಗೆ ಈ ವಿಚಾರ ಮನದಟ್ಟಾಗಿತ್ತು. ಯಾಕೆಂದರೆ ಜನತಾಂತ್ರಿಕ ಆಶಯಗಳು ಗರಿಗೊಟ್ಟತೊಡಗಿದ್ದ ಸಂದರ್ಭದಲ್ಲಿ, ಈ ಬೇಡಿಕೆ ತಿರಸ್ಕರಿಸಿದರೆ ಅದು ರಾಜತ್ವದ ವಿರುದ್ಧ ತಿರುಗಿ ಬೀಳುವ ಸಾಧ್ಯತೆಯಿತ್ತು. ಈ ವಿಚಾರವಾಗಿ ದಿವಾನರಾಗಿದ್ದ ವಿಶ್ವೇಶ್ವರಯ್ಯನವರು ಅನುಕೂಲಕರವಾಗಿ ವರ್ತಿಸಲಿಲ್ಲ. ಇದು ಸಂಘರ್ಷಕ್ಕೆ ಕಾರಣವಾಯಿತು. ಅಂತಿಮವಾಗಿ ದಿವಾನರನ್ನು ಕಡೆಗಣಿಸಿ ಮಹಾರಾಜರು ಭಾರತದಲ್ಲೇ ಮೊದಲ ಹಿಂದುಳಿದ ವರ್ಗಗಳ ಸಮಿತಿಯೊಂದನ್ನು ರಚಿಸುವ ತೀರ್ಮಾನ ಕೈಗೊಂಡಾಗ,

ವಿಶ್ವೇಶ್ವರಯ್ಯ ನವರು ರಾಜೀನಾಮೆ ನೀಡುವುದು ಅನಿವಾರ್ಯವಾಯಿತು. ಈ ಬಗ್ಗೆ ಮಹಾರಾಜರು ತೆಗೆದುಕೊಂಡ ತೀರ್ಮಾನ ಸರಿಯಾಗಿಯೇ ಇತ್ತು. ಆದರೂ ವಿಶ್ವೇಶ್ವರಯ್ಯನವರ ಸಂಕೀರ್ಣ ನಿಲುವು ವಿಚಾರಯೋಗ್ಯ. ಅವರು ಪ್ರಾಮಾಣಿಕರು, ಸತ್ಯಸಂಧ ಪ್ರಗತಿವಾದಿ. ಮೈಸೂರಿಗೆ ಅವರು ಕೊಟ್ಟಕೊಡುಗೆ ಅಪಾರ. ಅವರನ್ನು ಹೆಚ್ಚು ಸಹಾನುಭೂತಿಯಿಂದ ನಡೆಸಿಕೊಳ್ಳಬೇಕಿತ್ತು. ಇದು ಮೇಷ್ಟ್ರ ಅಭಿಪ್ರಾಯ. ಅದು ಸರಿ ಮತ್ತು ನಡೆದದ್ದು ಹಾಗೆಯೇ. 1918ರ ಜೂನ್‌ನಲ್ಲಿ ದಿವಾನರು ತಮ್ಮ ರಾಜೀನಾಮೆ ಇಂಗಿತ ವ್ಯಕ್ತಪಡಿಸಿದರೂ ಒಂದು ವರ್ಷದವರೆಗೂ ಮಹಾರಾಜರು ಅವರನ್ನು ಬಿಡುಗಡೆಗೊಳಿಸಲಿಲ್ಲ. ಆದರೆ ಅಂತಿಮವಾಗಿ ಅದು ರಾಜಕೀಯ-ಆಡಳಿತಾತ್ಮಕ ತೀರ್ಮಾನ. ಸಹಜವಾಗಿಯೇ ಮಹಾರಾಜರ ತೀರ್ಮಾನವೇ ಅಂತಿಮವಾಯಿತು.

ಈ ವಿಚಾರವಾಗಿ ಮಾತನಾಡುತ್ತಾ ಮೇಷ್ಟ್ರು 1984ರಲ್ಲಿ ಒಂದು ಪ್ರಶ್ನೆಕೇಳಿದ್ದರು. "ಸರಿಕಣಯ್ಯ. ಮೊದಲು ನಮ್ಮಲ್ಲಿ ಮೀಸಲಾತಿ ಜಾರಿಗೆ ತಂದವರ್‍ಯಾರು?" ಎಂದು ಕೇಳಿ ನಾನು ಮಾತನಾಡುವುದಕ್ಕೂ ಮುನ್ನವೇ "ಬ್ರಾಹ್ಮಣರು. ಅದೂ ಶೇಕಡಾ ನೂರರಷ್ಟು" ಎಂದು ಅವರೇ ಉತ್ತರಿಸಿದರು. ಆದರೂ ಅದು ಅಂಶಿಕ ಸತ್ಯ. ಹೆಚ್ಚೆಂದರೆ ಸಂಸ್ಕೃತ ಅಧ್ಯಯನದ ಮೇಲೆ ಮತ್ತು ಆದ್ದರಿಂದಲೇ ಬೌದ್ಧಿಕ ಕ್ಷೇತ್ರದ ಮೇಲೆ ಅವರಿಗೆ ಸ್ವಾಮ್ಯವಿತ್ತು. ಇತರ ಕ್ಷೇತ್ರಗಳಲ್ಲಿ ಅಲ್ಲ. ರಾಜತ್ವ, ಸೈನ್ಯಾಧಿಕಾರ ಸೇರಿ ವ್ಯಾಪಾರ, ವ್ಯವಸಾಯಗಳಲ್ಲಿ ಬ್ರಾಹ್ಮಣೇತರರದೇ ಅಧಿಪತ್ಯವಿತ್ತು.

ಇದೇ ಸಂದರ್ಭದಲ್ಲಿ ಪ್ರಸ್ತಾಪಿತವಾದದ್ದು 1933ರ ನಂತರ ಗಾಂಧೀ-ಕಾಂಗ್ರೆಸ್ ನಡುವಿನ ಸಂಬಂಧ, ಕಾಂಗ್ರೆಸ್ ರಾಜಕಾರಣಕ್ಕೆ ಗಾಂಧೀಜಿ ಇದ್ದೂ ಇಲ್ಲದಂತಿದ್ದರು. ಅವರು 1933ರ ನಂತರ ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯತ್ವವನ್ನೂ ಹೊಂದಿರಲಿಲ್ಲ. ಕಾಂಗ್ರೆಸ್ಸಿನ ಒಳಜಗಳಗಳು, ಗಾಂಧೀಯವರ ನೆಚ್ಚಿನ ಕಾರ್ಯಕ್ರಮಗಳಾದ ಅಸ್ಪೃಶ್ಯತಾ ನಿವಾರಣೆ, ಹಿಂದೂ-ಮುಸ್ಲಿಂ ಸಾಮರಸ್ಯ, ಖಾದಿ-ಗ್ರಾಮೋದ್ಯೋಗ, ಗ್ರಾಮ ಕೈಗಾರಿಕಾ ಸಂಘ ಮುಂತಾದವುಗಳ ಬಗ್ಗೆ ಕಾಂಗ್ರೆಸ್ಸಿಗರಲ್ಲಿದ್ದ ನಿರಾಸಕ್ತಿ ಇವೆಲ್ಲಾ ಅದಕ್ಕೆ ಕಾರಣಗಳಿರಬೇಕು. ಹಾಗೆಯೇ ಅಲ್ಲಿಯವರೆಗೆ ರಾಜಾಜಿ, ಪಟೇಲರು ತಮ್ಮ ವಾರಸುದಾರರಾಗಲು ಅರ್ಹರೆಂದುಕೊಳ್ಳುತ್ತಿದ್ದ ಗಾಂಧೀಜೀ ಜವಹರ್‌ಲಾಲರ ಬಗ್ಗೆ ಆ ಒಲವು ಬೆಳೆಸಿಕೊಂಡದ್ದರ ಬಗ್ಗೆ ಕೆಲವು ವಿವರಗಳನ್ನು ಚರ್ಚಿಸಿದ್ದೆವು. ಇವೆಲ್ಲಾ ವಿವರವಾಗಿ ದಾಖಲಾಗಬೇಕು. ಆ ಬಗ್ಗೆ ನಿನ್ನ ಒಂದು ಲೇಖನವಿದೆ. ಆದರೆ ಅದನ್ನು ವಿಸ್ತರಿಸಿ ದಾಖಲಿಸು ಎಂದು ಸಲಹೆ ಮಾಡಿದ್ದು ನೆನಪಿದೆ.

ಪರಂಪರೆ, ಜಾತಿ, ಅಸ್ಪೃಶ್ಯತೆ, ಮತೀಯತೆಗಳು ಮತ್ತು ಅವುಗಳನ್ನು ಮೀರಲು ಪರಂಪರೆಯನ್ನು ಸೃಜನಶೀಲವಾಗಿ ಬಳಸಿಕೊಂಡು ಜಾತ್ಯತೀತ, ವಿಕೇಂದ್ರಿಕೃತ ಜನತಾಂತ್ರಿಕ ಸಮಾಜವಾದಿ ಸಮಾಜವೊಂದನ್ನು ಕಟ್ಟಲು ಕಂಡ ಕನಸುಗಳು ಮತ್ತು ಕೃತಿಯ ಮೂಲಕ ಅವನ್ನು ಸಾಧ್ಯವಾಗಿಸಿಕೊಳ್ಳುವ ಪ್ರಯತ್ನಗಳೇ ಅವರನ್ನು ಕೊನೆಯವರೆಗೂ ಆವರಿಸಿಕೊಂಡಿದ್ದವು ಅನಿಸುತ್ತದೆ.

■

# ಬಿಪನ್ ಚಂದ್ರ (1928–2014)

❑ ಬಿ. ಸುರೇಂದ್ರ ರಾವ್
ವಿಶ್ರಾಂತ ಪ್ರಾಧ್ಯಾಪಕರು,
"ಅಮೃತವರ್ಷಿಣಿ"
ಅಸೈಗೋಳಿ, ಕೊಣಾಜೆ,
ಮಂಗಳಗಂಗೋತ್ರಿ, ಮಂಗಳೂರು,
ದಕ್ಷಿಣ ಕನ್ನಡ –574199.
b.surendrarao@yahoo.com

**ಮೊ**ನ್ನೆ ಆಗಸ್ಟ್ ತಿಂಗಳ 30ನೇ ತಾರೀಖಿಗೆ ನಮ್ಮನ್ನು ಅಗಲಿದ ಪ್ರೊಫೆಸರ್ ಬಿಪನ್ ಚಂದ್ರ ಆಧುನಿಕ ಭಾರತದ ಇತಿಹಾಸ ರಚನೆಯಲ್ಲಿ ಒಂದು ಮೇರು ವ್ಯಕ್ತಿಯಾಗಿದ್ದರು. ಅವರನ್ನು ಕಳಕೊಂಡ ನಮ್ಮ ಇತಿಹಾಸ ರಚನಾಕ್ಷೇತ್ರ ಬಡವಾಗಿದೆ ಎಂದರೆ ಅದು ಉತ್ಪ್ರೇಕ್ಷೆಯಲ್ಲ, ಅಥವಾ ಸಂದುಹೋದವರ ಬಗ್ಗೆ ಆಡುವ ಔಪಚಾರಿಕ ಹೊಗಳಿಕೆಯ ಹುಸಿ ಮಾತಲ್ಲ. ಬಹುತೇಕ ಭಾರತದಲ್ಲಿ ವಸಾಹತುಶಾಹಿಯ ಸ್ವರೂಪ ಮತ್ತು ವಿರೂಪಗಳ ಕುರಿತು ಹಾಗೂ ಅದಕ್ಕೆ ಪ್ರತಿಕ್ರಿಯೆಯಾಗಿ ರೂಪುಗೊಂಡ ರಾಷ್ಟ್ರೀಯತೆ ಹಾಗೂ ಸ್ವಾತಂತ್ರ ಚಳುವಳಿಯ ಬಗ್ಗೆ ವಿಸ್ತಾರವಾಗಿ ಸಂಶೋಧನೆ ನಡೆಸಿದ ಬಿಪನ್ ಚಂದ್ರ ಅದರೊಳಗೆ ಉದ್ಭವಿಸಿದ ಅಥವಾ ಆವಾಹನೆಗೊಂಡ ಕೋಮುವಾದಗಳ ವಿವಿಧ ರೂಪಗಳು ಮತ್ತು ಅವುಗಳ ರಾಜಕೀಯ ಹಾಗೂ ಸಾಮಾಜಿಕ ಅನಿಷ್ಟ ಪ್ರಭಾವಗಳ ಬಗ್ಗೆ ತೀಕ್ಷ್ಣವಾಗಿ ಬರೆದರು. ಎಡಪಂಥೀಯ ಒಲವಿದ್ದ ಅವರು ರಾಷ್ಟ್ರೀಯ ಚಳುವಳಿಯ ಕಾಲದಲ್ಲಿ ಬಂಡವಾಳಶಾಹಿಯ ಪಾತ್ರ ಮತ್ತು ಪ್ರಭಾವ ಹಾಗೂ ಆ ನೆಲೆಯಲ್ಲಿ ಭಾರತದ ಆರ್ಥಿಕ ಇತಿಹಾಸದ ಹಲವು ಆಯಾಮಗಳ ಮೇಲೆ ಹಾಗೂ ಸ್ವಾತಂತ್ರ ಚಳುವಳಿಯ ಮೇಲೆ ಎಡಪಂಥೀಯ ವಿಚಾರ ಮತ್ತು ಕಾರ್ಯಕ್ರಮಗಳ ಪ್ರಭಾವಗಳ ಮೇಲೂ ಅವರು ವಿಸ್ತಾರವಾಗಿ ಬರೆದರು. ಸ್ವಾತಂತ್ರ್ಯೋತ್ತರ ಭಾರತದ ಬೆಳೆವಣಿಗೆಯನ್ನು ಮೌಲೀಕರಿಸುವಲ್ಲಿ ಧರ್ಮನಿರಪೇಕ್ಷ ನಿಲುವಿನತ್ತ ಖಚಿತವಾದ ಒಲವನ್ನು ತೋರಿದ ಅವರು ಆಗಾಗ ಉಲ್ಬಣಿಸುವ ಕೋಮುವಾದಕ್ಕೆ ವಿರೋಧವನ್ನು ವ್ಯಕ್ತಪಡಿಸಿದರು. ಅದಲ್ಲದೆ ಸ್ವಲ್ಪ ವಿವಾದಾಸ್ಪದ ನೆಲೆಯಲ್ಲಿ ಅವರು ಸತ್ತಾರೂಢ ಕಾಂಗ್ರೆಸ್ಸಿನ ಉದಾರವಾದಿ

ಕಾರ್ಯನೀತಿ ಹಾಗೂ ಅದು ಆಗಾಗ ಎತ್ತುತ್ತಿದ್ದ ಎಡಪಂಥೀಯ ಉದ್ಘೋಷ, ಅಂಗಸನ್ನೆಗಳನ್ನು ಹೊಂದಾಣಿಕೆಗೊಳಿಸುವ ಪ್ರಯತ್ನವನ್ನು ಮಾಡಿದರು. ಇದರಿಂದ ಅವರು ಕೆಲವು ಸೈದ್ಧಾಂತಿಕ ಮತ್ತು ರಾಜಕೀಯ ವಿವಾದಕ್ಕೆ ಸಿಲುಕಿಕೊಂಡದ್ದೂ ಇದೆ. ಹಾಗಿದ್ದರೂ ಅವರು ತಮ್ಮ ನಿಲುವನ್ನು ರಾಜಿಮಾಡಿಕೊಳ್ಳಲಿಲ್ಲ ಎಂಬುದು ಗಮನಾರ್ಹ.

* * *

ಸ್ವಾತಂತ್ರ್ಯಪೂರ್ವ ಪಂಜಾಬಿನ ಕಾಂಗ್ರದಲ್ಲಿ ಜನಿಸಿದ ಬಿಪನ್ ಚಂದ್ರ ಅವರು ಲಾಹೋರಿನ ಫೋರ್ಮನ್ಸ್ ಕ್ರಿಶ್ಚನ್ ಕಾಲೇಜಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಪಡೆದರು. ದೇಶದ ವಿಭಜನೆಯಾದ ಕಾರಣ ಲಾಹೋರನ್ನು ತ್ಯಜಿಸಬೇಕಾಗಿ ಬಂದದ್ದು ಅವರ ಜೀವನದಲ್ಲಿ ಒಂದು ವಿಶೇಷ ಘಟ್ಟ. ತಮ್ಮ ವಿದ್ಯಾಭ್ಯಾಸವನ್ನು ಅಮೇರಿಕಾದ ಸ್ಟಾನ್ಫರ್ಡ್ ವಿಶ್ವವಿದ್ಯಾಲಯದಲ್ಲಿ ಮುಂದುವರಿಸಿದಾಗ ಅಲ್ಲಿ ಅವರು ಪಾಲ್ ಬರನ್ (ಅವರ *ದಿ ಪೊಲಿಟಿಕಲ್ ಇಕಾನೊಮಿ ಅಫ್ ಗ್ರೋತ್* ಎಂಬ ಗ್ರಂಥ 1957ರಲ್ಲಿ ಪ್ರಕಟವಾಯಿತು.) ಅವರ ಉಪನ್ಯಾಸಗಳನ್ನು ಕೇಳಿ ಮಾರ್ಕ್ಸ್‌ವಾದದ ಪ್ರಭಾವಕ್ಕೆ ಒಳಗಾಗಿ, ಕಲಿಯುತ್ತಿದ್ದ ಇಂಜಿನಿಯರಿಂಗ್ ವಿಷಯವನ್ನು ಕೈಬಿಟ್ಟು ಅರ್ಥಶಾಸ್ತ್ರ ಮತ್ತು ಇತಿಹಾಸವನ್ನು ಅಭ್ಯಾಸ ಮಾಡತೊಡಗಿದರು. ಪಾಲ್ ಬರನ್ ಜಾಗತಿಕ ನೆಲೆಯಲ್ಲಿ ಅನಭಿವೃದ್ಧಿಯ ಬೆಳವಣಿಗೆಯ ಬಗ್ಗೆ ಪರಿಣಾಮಕಾರಿಯಾಗಿ, ಖಂಡಿಸಿ ಬರೆದಿದ್ದರು. ಇದು ವಸಾಹತುಶಾಹಿ ಪ್ರಕ್ರಿಯೆಯನ್ನು ಬೆತ್ತಲಾಗಿಸಿ, ಜಾಗತಿಕ ಆರ್ಥಿಕ ಅಸಮಾನತೆಯ ಸ್ವರೂಪ ಮತ್ತು ಕಾರಣಗಳನ್ನು ನಿರೂಪಿಸಲು ಸಾಧ್ಯವಾಯಿತು. ಈ ವಿಷಯವನ್ನು ಭಾರತದ ವಸಾಹತುಶಾಹಿಯ ಸಂದರ್ಭದಲ್ಲಿ ಅಧ್ಯಯನ ಮಾಡುವುದರ ಬಗ್ಗೆ ಬಿಪನ್ ಚಂದ್ರ ಮನಸ್ಸುಮಾಡಿದ್ದು ಆಗಲೇ. ಆದರೆ ಅವರ ಮಾರ್ಕ್ಸ್‌ವಾದದ ಒಲವು, ಕಮ್ಯೂನಿಸ್ಟರೊಡನೆ ಒಡನಾಟ ಅವರನ್ನು ಅಮೇರಿಕಾದಲ್ಲಿ ಹೆಚ್ಚು ದಿನ ಇರಗೊಡಲಿಲ್ಲ. ಸೆನೆಟರ್ ಜೋಸೆಫ್ ಮೆಕಾರ್ಥಿಯವರ ಕಮ್ಯೂನಿಸ್ಟ್ ದಮನ ನೀತಿಯಿಂದಾಗಿ ಅಮೇರಿಕಾದಿಂದ ಕಾಲ್ಕಿತ್ತವರಲ್ಲಿ ಬಿಪನ್ ಚಂದ್ರರೂ ಒಬ್ಬರು.

ಆದರೆ ಅಮೇರಿಕಾದಲ್ಲಿ ಗಳಿಸಿಕೊಂಡದ್ದು ಇವರಲ್ಲಿ ಉಳಿಯಿತು. ಭಾರತಕ್ಕೆ ವಾಪಾಸಾದ ಬಿಪನ್ ಚಂದ್ರ ದೆಹಲಿ ವಿಶ್ವವಿದ್ಯಾಲಯದ ಹಿಂದೂ ಕಾಲೇಜಿನಲ್ಲಿ ಇತಿಹಾಸ ಅಧ್ಯಾಪಕರಾಗಿ ಸೇರ್ಪಡೆಗೊಂಡರು. ಅಲ್ಲಿದ್ದಾಗ ಅವರು ಡಾ. ಬಿಶ್ವೇಶ್ವರ ಪ್ರಸಾದ್ ಅವರ ಮಾರ್ಗದರ್ಶನದಲ್ಲಿ ತಮ್ಮ ಪಿಹೆಚ್.ಡಿ ಪದವಿ ಮುಗಿಸಿದ್ದಲ್ಲದೆ (1963) ಅವರ ಸಂಶೋಧನಾ ಪ್ರಬಂಧ *ಇಕೊನೊಮಿಕ್ ಪಾಲಿಸೀಸ್ ಅಫ್ ಇಂಡಿಯನ್ ನ್ಯಾಶನಲ್ ಲೀಡರ್‌ಶಿಪ್, 1880–1905* ಮುಂದೆ *ದಿ ರೈಸ್ ಎಂಡ್ ಗ್ರೋತ್ ಅಫ್ ಇಕೊನೊಮಿಕ್ ನ್ಯಾಶನಲಿಸಮ್ ಇನ್ ಇಂಡಿಯಾ* ಎಂಬ ಶೀರ್ಷಿಕೆಯಲ್ಲಿ ಬೃಹತ್ ಹೊತ್ತಗೆಯಾಗಿ ಹೊರಬಂತು(1966). ಭಾರತದಲ್ಲಿ ವಸಾಹತುಶಾಹಿಯ ವಿರಾಟ್ ಸ್ವರೂಪ ಮತ್ತು ಅದರ ವಿವಿಧ ವಿಕೃತಿಗಳನ್ನು ಹತ್ತೊಂಭತ್ತನೇ ಶತಮಾನದ ಉತ್ತರಾರ್ಧದಲ್ಲಿ ಭಾರತದ ಅನೇಕ ರಾಷ್ಟ್ರೀಯ ಚಿಂತಕರು ಅನಾವರಣಗೊಳಿಸಿದರು ಎಂಬುದನ್ನು ಈ ಗ್ರಂಥವು ವಿಸ್ತೃತವಾಗಿ ವಿವರಿಸುತ್ತದೆ. ನಮ್ಮ ಸ್ವಾತಂತ್ರ್ಯ ಚಳುವಳಿಯ ಕಥನದಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸಿನ ಸಂಸ್ಥಾಪಕರು ಮತ್ತು ಹಿರಿಯ ಧುರೀಣರನ್ನು 'ಸೌಮ್ಯವಾದಿ'ಗಳೆನ್ನುವುದುಂಟು; ಹಾಗೆಂದು



ಮೂದಲಿಸುವುದುಂಟು. ಬ್ರಿಟಿಷ್ ಆಳ್ವಿಕೆಯು ಭಾರತಕ್ಕೆ ಶ್ರೇಯಸ್ಸನ್ನುಂಟು ಮಾಡುವಂಥಾದ್ದು, ಶಾಂತಿ ಸಮೃದ್ಧಿಯನ್ನು ನೀಡುವಂಥಾದ್ದು, ನೂರುವರ್ಷ ಬಾಳಬೇಕಾದಂಥಾದ್ದು. ಅದು ನಮಗೆ ಬೇಕು. ಆದರೆ ಅದು ತನ್ನ ಔದಾರ್ಯವನ್ನು ತೋರಿ ಸಮರ್ಥ ಭಾರತೀಯರನ್ನು ಆಡಳಿತದಲ್ಲಿ ಪಾಲುದಾರರನ್ನಾಗಿ ಮಾಡಬೇಕು, ಆಳರಸರ ಸೇವೆಗೆ ಹೆಚ್ಚಿನ ಅವಕಾಶವನ್ನು ಒದಗಿಸಬೇಕು. ಇದು ಬ್ರಿಟಿಷರು ತಮ್ಮೂರಿನಲ್ಲಿ ಅನುಸರಿಸುವ ವಿಧಾನ. ಅದು ಭಾರತೀಯರಿಗೂ ಪ್ರಾಪ್ತವಾಗಬೇಕು ಎಂಬುದು ಅವರ ಕಳಕಳಿಯ ಬೇಡಿಕೆ. ಇದನ್ನು ಭಾಷಣಗಳಲ್ಲಿ, ಮಂಡಿಸುವ ಠರಾವುಗಳಲ್ಲಿ, ಅರ್ಪಿಸುವ ಅರ್ಜಿಗಳಲ್ಲಿ ಆಗಾಗ ಪುನರುಚ್ಚರಿಸಿ ಆಳರಸರ ಕೃಪಾಕಟಾಕ್ಷ ತಮ್ಮ ಮೇಲೆ ಯಾವಾಗ ಬೀಳುವುದೆಂದು ನಿರೀಕ್ಷಿಸುವುದು ಅವರ ವಾಡಿಕೆಯಾಗಿತ್ತು. ಇದನ್ನು ಕಟುವಾಗಿ ವಿರೋಧಿಸಿ ಲೇವಡಿಮಾಡಿದ 'ತೀವ್ರವಾದಿ'ಗಳು ಸ್ವಾತಂತ್ರ್ಯ ಚಳುವಳಿಯನ್ನು ಸತ್ತೆಯ ವಿರೋಧ ಕಾರ್ಯಾಚರಣೆಯತ್ತ ಮುಖಮಾಡುವಂತೆ ಮಾಡಿದ್ದು, ಇದರಿಂದ ಕಾಂಗ್ರೆಸ್ಸಿನಲ್ಲಿ ಒಡಕು ಕಂಡದ್ದು –ಇದೆಲ್ಲಾ ತಿಳಿದ ವಿಚಾರವೇ.

'ಸೌಮ್ಯವಾದಿ'ಗಳ ಈ ಸುಲಭ ಚಿತ್ರಣದಿಂದಾಚೆಗೆ ಭಾರತದ ರಾಷ್ಟ್ರೀಯತೆಯ ಅಭಿವ್ಯಕ್ತಿಗೆ ಅವರ ನಿಜವಾದ ಕೊಡುಗೆಯನ್ನು ಬಿಪನ್ ಚಂದ್ರ 'ಆರ್ಥಿಕ ರಾಷ್ಟ್ರೀಯತೆ'ಯ ಚೌಕಟ್ಟಿನಲ್ಲಿ ವಿವರಿಸಿದರು. ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯು ಅನೇಕ ಉತ್ತಮ ಪರಿಣಾಮಗಳನ್ನು ಬೀರಿದರೂ ಅದು ದೇಶಕ್ಕೆ ಒಂದು ನಿಜವಾದ ವರವಾಗಿ ಒದಗಿಬರಲಿಲ್ಲ.

ಅದು ಇಲ್ಲಿ ವಸಾಹತುಶಾಹಿ ನೆಲೆಯಲ್ಲಿ ವರ್ತಿಸುವುದರಿಂದ ಬ್ರಿಟಿಷ್ ಮತ್ತು ಭಾರತದ ಹಿತಾಸಕ್ತಿಗಳೊಳಗೆ ಒಂದು ಮೂಲಭೂತವಾದ ವೈರುಧ್ಯವು ಏರ್ಪಟ್ಟಿತು ಎಂಬುದನ್ನು ದಾದಾಭಾಯಿ ನವರೋಜಿ, ಜಸ್ಟಿಸ್ ರಾನಡೆ, ಆರ್.ಸಿ.ದತ್, ಜಿ.ವಿ.ಜೋಶಿ, ಬೋಲಾನಾಥ ಚಂದ್ರ, ಗೋಪಾಲಕೃಷ್ಣ ಗೋಖಲೆ, ಜಿ.ಎಸ್. ಅಯ್ಯರ್ ಮೊದಲಾದವರು ಸೋದಾಹರಣವಾಗಿ, ನಿರ್ದಾಕ್ಷಿಣ್ಯವಾಗಿ ಪ್ರತಿಪಾದಿಸಿದರು. ವಸಾಹತುಶಾಹಿ ವ್ಯವಸ್ಥೆಯು ಭಾರತವನ್ನು ಸಮೃದ್ಧಗೊಳಿಸುವ ಬದಲು ಅಲ್ಲಿ ಬಡತನವನ್ನು ಹೆಚ್ಚಿಸಿ, ದೇಶವನ್ನು ಕೃಶಗೊಳಿಸಿತು. ಇದಕ್ಕೆ ವಾಸ್ತವದ ಕನ್ನಡಿ ದೇಶಕ್ಕೆ ಆಗಾಗ ವಕ್ಕರಿಸುವ ಬರ. ಇದು ಕೇವಲ ಪ್ರಕೃತಿಯ ಮುನಿಸಿನಿಂದಾಗಿ ಆಗುವ ಅನಿಷ್ಟವಲ್ಲ; ಬದಲಾಗಿ ಅದು ಪ್ರಕೃತಿಯ ಅನಿಶ್ಚಿತ ನಡವಳಿಕೆಯನ್ನು ಸರಿಯಾಗಿ ನಿಭಾಯಿಸಲಾಗದಾಗ ಒದಗುವ ಸ್ಥಿತಿ. ಇದರ ಬಗ್ಗೆ ಆಳ್ವಿಕೆಯು ತೋರುವ ಸಂವೇದನಾರಹಿತ ಅಸಡ್ಡೆಯಿಂದಾಗಿ ಬಡದೇಶವು ಬರದೇಶವಾಗಿ, ಬರದೇಶವು ಬಡದೇಶವಾಗಿ ಬೆಳೆಯಲು ಸಾಧ್ಯವಾಯಿತು. ಇಲ್ಲಿ ಏಳಿಗೆ ಹೊಂದುತ್ತಿದ್ದ ಬಡತನವನ್ನು ಇಲ್ಲಿಯ ಜನತೆಯ ತೀರ ಕಡಿಮೆ ತಲಾ ಆದಾಯವು ಪ್ರತಿಬಿಂಬಿಸಿತು. ಇದರ ಅಂದಾಜುಗಳಲ್ಲಿ ವ್ಯತ್ಯಾಸವಿದ್ದರೂ ಭಾರತದ(2ಪೌಂಡುಗಳು) ಮತ್ತು ಬ್ರಿಟನ್ನಿನ(41ಪೌಂಡುಗಳು) ಅತೀವ ಅಂತರ ಗಮನಾರ್ಹ ಎಂದು ರಾಷ್ಟ್ರೀಯ ಧುರೀಣರು ಪ್ರತಿಪಾದಿಸಿದರು. ಭಾರತದಲ್ಲಿ ಉಲ್ಬಣಿಸುವ ಬಡತನಕ್ಕೆ ಇಲ್ಲಿನ ದೇಶೀ ಕೈಗಾರಿಗೆಗಳ ನಾಶದೊಂದಿಗೆ ಆಧುನಿಕ ಕೈಗಾರಿಕೀಕರಣಕ್ಕೆ ಸರಿಯಾದ ಚಾಲನೆ ನೀಡದಿರುವುದು ಒಂದು ಮುಖ್ಯ ಕಾರಣ ಎಂದು ವಾದಿಸಿದರು. ಬಡ ಭಾರತವು ಬಂಡವಾಳ ಸಂಚಯನಕ್ಕೆ ಅನುಕೂಲವಲ್ಲದ ಕಾರಣ ಹೆಚ್ಚಿನ ಸ್ವದೇಶೀ ಹೂಡಿಕೆ ಅಸಾಧ್ಯವಾದದ್ದಲ್ಲದೆ ಅದು ವಿದೇಶಿ ಬಂಡವಾಳಕ್ಕೆ ಹೆಚ್ಚಿನ ಅವಕಾಶವನ್ನು ನೀಡಿ ಭಾರತದ ಕೈಗಾರಿಕಾ ಅಭಿವೃದ್ಧಿಯನ್ನು ಕುಂಠಿತಗೊಳಿಸಿತು. ಸರಕಾರದ ಆಮದು-ರಫ್ತು ಸುಂಕನೀತಿಯೂ ದೇಶೀಯ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವಂಥಾದ್ದಾಗಿರಲಿಲ್ಲ. ದೇಶೀಯ ಹಾಗೂ ಗುಡಿ ಕೈಗಾರಿಕೆಗಳು ನಾಶಗೊಂಡಾಗ ಕೃಷಿಯ ಮೇಲೆ ಅವಲಂಬನೆ ತೀರ ಹೆಚ್ಚಾಯಿತು. ಆದರೆ ಸರಕಾರದ ಧೋರಣೆಯೂ ಕೃಷಿಯನ್ನು ತೀರ ಕೃಶಗೊಳಿಸಿತು. ಭೂಕಂದಾಯದ ವಿಪರೀತ ಹೊರೆ ಕೃಷಿಕನ ಮೇಲೆ ಬಿದ್ದು ಅವನನ್ನು ಜರ್ಜರಿತಗೊಳಿಸಿತು, ಹಾಗೂ ಅರ್ಥಪೂರ್ಣ ಜೀವನೋಪಾಯದಿಂದ ವಂಚಿತಗೊಳಿಸಿತು. ಸಾಲಗಾರರ ಧೃತರಾಷ್ಟ್ರಾಲಿಂಗನಕ್ಕೆ ತಳ್ಳಿತು. ಕ್ಷಾಮ ಸನ್ನಿವೇಶದ ಕ್ರೌರ್ಯವನ್ನು ಹೆಚ್ಚಿಸಿತು. ಸರಕಾರಕ್ಕೆ ಕ್ಷಾಮ ನಿವಾರಣಾ ಕಾರ್ಯಕ್ರಮಗಳಲ್ಲಿ ಹೆಚ್ಚೇನೂ ಆಸಕ್ತಿ ಇಲ್ಲದ ಕಾರಣ ಆ ಪರಿಸ್ಥಿತಿಯಲ್ಲಿ ಬಡವರ ನಿರ್ಮೂಲನೆಯಷ್ಟೇ ಸಾಧ್ಯವಾಯಿತು ಎಂದು ರಾಷ್ಟ್ರೀಯ ಚಿಂತಕರು ವಾದಿಸಿದರು. ಅಧಿಕ ಕರ ಹೇರಿಕೆ ಹಾಗೂ ಜನಹಿತಕ್ಕೆ ಸಾಧನವಾಗದ ವೆಚ್ಚಗಳು ಬಡತನವು ಸಮಾಜದಲ್ಲಿ ಗಟ್ಟಿಯಾಗಿ ಬೇರೂರುವಂತೆ ಮಾಡಿತು. ಇದಲ್ಲದೆ ದಾದಾಭಾಯಿ ನವರೋಜಿಯಂಥವರು "ಸೋರಿಕೆಯ ಸಿದ್ಧಾಂತ"ವನ್ನು ಪ್ರತಿಪಾದಿಸಿ ಅದು ಹೇಗೆ ಭಾರತದ ಸಂಪತ್ತನ್ನು ಕ್ಷೀಣಗೊಳಿಸಿ ಅದನ್ನು ಬಡ ದೇಶವಾಗಿಸಿತು ಎಂದು ತೋರಿಸಿಕೊಟ್ಟರು. ದೇಶದ ಸಂಪತ್ತಿನ ಸೋರಿಕೆಯನ್ನು ಭಾರತವು ಮಾಡುವ ಆಯಾತಕ್ಕಿಂತ ಹೆಚ್ಚಿನ ನಿರ್ಯಾತವು ಖಚಿತವಾಗಿ ಸೂಚಿಸುತ್ತದೆ. ವಸಾಹತುಶಾಹಿ ಸಂದರ್ಭದಲ್ಲಿ ನಡೆಯುವ ಈ ವೈಪರೀತ್ಯದ ವ್ಯಾಪಾರ ಸಂಬಂಧದಲ್ಲಿ ಅಧಿಕ ನಿರ್ಯಾತವು ಬ್ರಿಟಿಷ್ ಅಧಿಕಾರಿಗಳ ಸಂಬಳ, ವಿದೇಶಿ ಬಂಡವಾಳಕ್ಕೆ ನೀಡಬೇಕಾದ

ಲಾಭಾಂಶ ಹಾಗೂ ಬ್ರಿಟನ್ ತನ್ನೂರಿಂದಲೇ ಭಾರತವನ್ನು ಆಳುವ ವ್ಯವಸ್ಥಾವೆಚ್ಚವನ್ನು ಭಾರತೀಯರೇ ಭರಿಸಬೇಕೆಂಬ ತರ್ಕದ ಆಧಾರದಲ್ಲಿ ಕಸಿದುಕೊಳ್ಳುವ "ಮನೆ ವೆಚ್ಚ"ಗಳನ್ನು ಪೂರೈಸುತ್ತಿತ್ತು. ಈ ಸಂಪತ್ತಿನ ಸೋರಿಕೆಯನ್ನು ಅನೇಕ ರೀತಿಯಲ್ಲಿ ಅಂದಾಜು ಮಾಡಲಾಯಿತು. ಇದರ ವಾದ ಸಾಧುವೇ ಎಂಬ ಚರ್ಚೆ ನಡೆದೇ ಇದೆ. ಆದರೆ ವಸಾಹತುಶಾಹಿಯು ಕೊನೆಗಾಣದೆ ಈ ಸಂಪತ್ತಿನ ಸೋರಿಕೆಯನ್ನು ನಿಲ್ಲಿಸುವುದು ಅಸಾಧ್ಯ ಎಂಬ ಸೂಚನೆ 'ಸೌಮ್ಯವಾದಿ'ನಾಯಕರು ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯ ವಿರುದ್ಧ ಮಾಡಿದ ದೊಡ್ಡ ಹಾಗೂ ಕ್ರಾಂತಿಕಾರಕ ಆಪಾದನೆ. ವಸಾಹತುಶಾಹಿಯ ಸಾಂಸ್ಥಿಕ ಕ್ರೌರ್ಯ ಮತ್ತು ಶೋಷಣಾ ಪ್ರತಿಭೆಗಳನ್ನು ಸೋದಾಹರಣವಾಗಿ, ನಿರ್ದಾಕ್ಷಿಣ್ಯವಾಗಿ ಅನಾವರಣಗೊಳಿಸಿದ ಕೀರ್ತಿ ಈ ರಾಷ್ಟ್ರೀಯ ಚಿಂತಕರಿಗೆ ಸಲ್ಲಬೇಕು. ಇವರ ಚಿಂತನೆ ಮತ್ತು ವಾದಗಳು ಭಾರತದ ರಾಷ್ಟ್ರೀಯ ಚಳುವಳಿಗೆ ಸೈದ್ಧಾಂತಿಕ ತಳಹದಿಯನ್ನು ನೀಡಿತು. ಬ್ರಿಟಿಷ್ ಆಳ್ವಿಕೆಯನ್ನು ಪರಕೀಯರ ಆಳ್ವಿಕೆ ಎಂದಷ್ಟೇ ಖಂಡಿಸಬೇಕಾಗಿಲ್ಲ. ಅದನ್ನು ವಸಾಹತುಶಾಹಿ ಆಳ್ವಿಕೆ ಎಂಬ ಕಾರಣಕ್ಕೆ ನಿರಾಕರಿಸಬೇಕು. ಆ ಕಾರಣದಿಂದ ಅವರ ಪರಕೀಯತೆಯು ವರ್ಣಬೇಧ, ಮತೀಯಬೇಧಗಳಿಂದ ಇನ್ನೂ ಖಚಿತವೂ, ದುರ್ಲಂಘ್ಯವೂ ಆಗುತ್ತದೆ ಎಂಬ ವಾದವು ಭಾರತದ ಸಂದರ್ಭದಲ್ಲಿ ಹಾಗೂ ಪರ್ಯಾಯವಾಗಿ ಇಡೀ ಜಾಗತಿಕ ನೆಲೆಯಲ್ಲಿ ವಸಾಹತುಶಾಹಿಯನ್ನು ಬೆತ್ತಲೆಗೊಳಿಸಿದ ಕೆಲಸವನ್ನು ಭಾರತದ ರಾಷ್ಟ್ರೀಯ ಚಿಂತಕರು ಮಾಡಿದರು ಎಂದು ಬಿಪನ್ ಚಂದ್ರ ಪ್ರತಿಪಾದಿಸಿದರು. ರಾಷ್ಟ್ರೀಯ ಚಳುವಳಿಯ ಈ ಸೈದ್ಧಾಂತಿಕ ಬುನಾದಿಯನ್ನು 'ತೀವ್ರವಾದಿ'ಗಳಾಗಲೀ, ಗಾಂಧೀಜಿಯವರಾಗಲೀ ಅಥವಾ ಎಡಪಂಥೀಯರಾಗಲೀ ಮೂಲತಃ ಬದಲಾಯಿಸಲಿಲ್ಲ ಎಂಬುದೂ ಗಮನಾರ್ಹ.

ವಸಾಹತುಶಾಹಿಯ ಸ್ವರೂಪ ಮತ್ತು ರಾಷ್ಟ್ರೀಯತೆಯ ಅಭಿವ್ಯಕ್ತಿ ಬಿಪನ್ ಚಂದ್ರ ಅವರ ಬರೆವಣಿಗೆಗಳಿಗೆ ಹೂರಣವಾದದ್ದನ್ನು ನಾವು ಕಾಣುತ್ತೇವೆ. ಅವರು ಸ್ಥಾಪಿಸಿದ ಎನ್ಕ್ವಯರಿ ಎಂಬ ನಿಯತಕಾಲಿಕದಲ್ಲಿ ಕಾರ್ಲ್ ವಿಟ್‌ಫೋಗೆಲ್ ಅವರ "ಓರಿಯಂಟಲ್ ಡೆಸ್ಪಾಟಿಸಂ" ಬಗ್ಗೆ ಹಾಗೂ ಮುಘಲರ ಭಾರತದಲ್ಲಿ ಬಂಡವಾಳಶಾಹಿಯ ಬೆಳೆವಣಿಗೆಯ ಸಾಧ್ಯತೆಗಳ ಕುರಿತು ಇರ್ಫಾನ್ ಹಬೀಬರು ಬರೆದ ವಿಸ್ತೃತ ವಿಶ್ಲೇಷಣೆಗಳು ಪ್ರಕಟಗೊಂಡವು. ಮೊರಿಸ್ ಡಿ. ಮೊರಿಸ್ ಅವರು ಬ್ರಿಟಿಷ್ ಆಳ್ವಿಕೆಯಲ್ಲಿ ಭಾರತವು ಸಾಕಷ್ಟು ಏಳಿಗೆ ಹೊಂದಿತು ಎಂದು ಜರ್ನಲ್ ಆಫ್ ಎಕೊನಾಮಿಕ್ ಹಿಸ್ಟರಿ(1963)ನಲ್ಲಿ ವಾದಿಸಿದಾಗ ಅದನ್ನು 1968ರ ದಿ ಇಂಡಿಯನ್ ಇಕೊನಾಮಿಕ್ ಎಂಡ್ ಸೋಶಿಯಲ್ ಹಿಸ್ಟರಿ ರೆವಿಯ್ಯೂನಲ್ಲಿ ಬಿಪನ್ ಚಂದ್ರ ವಿಸ್ತಾರವಾಗಿ ಟೀಕಿಸಿ, ವಸಾಹತುಶಾಹಿಯು ಭಾರತವನ್ನು ಆರ್ಥಿಕವಾಗಿ ಹೇಗೆ ತೀವ್ರವಾಗಿ ಘಾಸಿಗೊಳಿಸಿತು ಎಂಬುದನ್ನು ಸಮರ್ಥವಾಗಿ ಪ್ರತಿಪಾದಿಸಿದರು. ಜವಹರ್‌ಲಾಲ್ ನೆಹರೂ ವಿಶ್ವವಿದ್ಯಾಲಯವು ಸ್ಥಾಪನೆಯಾದಾಗ(1969) ಅಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡ ಬಿಪನ್ ಚಂದ್ರ ತಮ್ಮ ಸಂಶೋಧನೆ, ಚಿಂತನೆ ಹಾಗೂ ಕಾರ್ಯ ಚಟುವಟಿಕೆಗಳನ್ನು ಮುಂದುವರಿಸಿದರು. 1970ರ ಇಂಡಿಯನ್ ಹಿಸ್ಟರಿ ಕಾಂಗ್ರೆಸ್ಸಿನ ಮೂವತ್ತೆರಡನೇ ಅಧಿವೇಶನ (ಜಬ್ಬಲ್ಪುರ)ದ ಆಧುನಿಕ ಭಾರತ ವಿಭಾಗದ ಒಂದು ಮಹತ್ವಪೂರ್ಣ ಅಧ್ಯಕ್ಷ ಭಾಷಣದಲ್ಲಿ ವಸಾಹತುಶಾಹಿ ಭಾರತವನ್ನು ದೇಶದ ಇತಿಹಾಸದ ಪ್ರತ್ಯೇಕ ಘಟಕವಾಗಿ ಹಾಗೂ ಅನುಭವ ಸಂದರ್ಭವಾಗಿ ನೋಡುವ

ಜರೂರನ್ನು ಪ್ರತಿಪಾದಿಸಿದರು. ಇದು ಜಾಗತಿಕ ವಸಾಹತುಶಾಹಿಯು ಭಾರತವನ್ನು ಹೇಗೆ ತನ್ನ ಕಪಿಮುಷ್ಟಿಯಲ್ಲಿ ಇಟ್ಟುಕೊಂಡಿತು ಎಂದು ತೋರಿಸುವುದಲ್ಲದೆ ಅದಕ್ಕೆ ಭಾರತದ ತಾರ್ಕಿಕ ಪ್ರತಿಕ್ರಿಯೆಯನ್ನು ವಿವರಿಸಲು ಸಾಧ್ಯವಾಗುತ್ತದೆ ಎಂದು ತೋರಿಸಿದರು.

ಮಾರ್ಕ್ಸಿಸ್ಟ್ ಸಿದ್ಧಾಂತವನ್ನು ನೆಚ್ಚಿ ಇತಿಹಾಸವನ್ನು ಅರ್ಥೈಸಹೊರಟ ಬಿಪನ್ ಚಂದ್ರ ಅದೇ ಸಿದ್ಧಾಂತದ ಸಾಂಪ್ರದಾಯಿಕ ವ್ಯವಸ್ಥೆಯೊಡನೆ ಕೆಲವು ತಾತ್ವಿಕ ಭಿನ್ನಾಭಿಪ್ರಾಯಗಳನ್ನು ಪ್ರಕಟಿಸಿದರು. ವರ್ಗ ಪ್ರಜ್ಞೆ ಮತ್ತು ಸಂಘರ್ಷಗಳ ನೆಲೆಯಲ್ಲಿ ಇತಿಹಾಸವನ್ನು ಹಾಗೂ ರಾಜಕೀಯವನ್ನು ನೋಡುವ ಮಾರ್ಕ್ಸಿಸ್ಟರ ಜಾಯಮಾನವನ್ನು ಅವರು ಒಪ್ಪಿಕೊಂಡರೂ ಅದರ ಜಿಗುಟನ್ನು ಮೀರುವ ಪ್ರಯತ್ನವನ್ನು ಬಿಪನ್ ಚಂದ್ರ ಮಾಡಿದರು. ಆರಂಭಿಕ ರಾಷ್ಟ್ರೀಯ ಚಿಂತಕರು ಬೂರ್ಜ್ವಾ(ಮಧ್ಯಮ ವರ್ಗ) ಚೌಕಟ್ಟಿನಲ್ಲಿ ಆಲೋಚಿಸಿ ವ್ಯವಹರಿಸಿದ್ದನ್ನು ಅವರು ಸ್ಪಷ್ಟವಾಗಿ ಗುರುತಿಸಿದರೂ ಅವರೆಲ್ಲಾ ಬಹುತೇಕ ಭಾರತದ ಮನಸ್ಸು, ದುಗುಡ, ಆಕ್ರೋಶ ಹಾಗೂ ತಾತ್ವಿಕ ಪ್ರತಿಕ್ರಿಯೆಗಳನ್ನು ಪ್ರತಿನಿಧಿಸಿದ್ದರು ಎಂದು ಪ್ರತಿಪಾದಿಸಿದರು. ಎಮ್.ಎನ್. ರಾಯ್, ಆರ್.ಪಿ. ದತ್, ಇ.ಎಮ್.ಎಸ್. ನಂಬೂದ್ರಿಪಾಡ್ ಮುಂತಾದವರು ಕಾಂಗ್ರೆಸ್ಸನ್ನು ಬೂರ್ಜ್ವಾ ಪಕ್ಷವೆಂದು ಚಿತ್ರಿಸಿ, ಅದರಿಂದಾಗಿ ನಮ್ಮ ರಾಷ್ಟ್ರೀಯ ಚಳುವಳಿಯು ರಷ್ಯಾ ಮತ್ತು ಚೀನಾ ದೇಶಗಳಂತೆ ಕ್ರಾಂತಿಯ ಮಾರ್ಗವನ್ನು ಹಿಡಿಯುವಲ್ಲಿ ಸೋತಿತು ಎಂದು ವಾದಿಸಿದ್ದರು. ಗಾಂಧೀಜಿ ಅಥವಾ ನೆಹರೂ ಮತ್ತು ಅವರ ಬೆನ್ನು ಹಿಡಿದ ಕಾಂಗ್ರೆಸ್ ಬೂರ್ಜ್ವಾ ಹಿತಾಸಕ್ತಿಯನ್ನೇ ಎತ್ತಿಹಿಡಿದ ಕಾರಣ ಅವರು ಕಾರ್ಮಿಕ ವರ್ಗದ ಅಥವಾ ರೈತಾಪಿ ಜನಗಳ ಮುಖವಾಣಿಯಾಗಲು ಸಾಧ್ಯವಾಗಲಿಲ್ಲ ಎಂದು ಜರೆದರು. ನಮ್ಮ ಸ್ವಾತಂತ್ರ್ಯ ಚಳುವಳಿಯ ಇತಿಹಾಸವನ್ನು, ಹಾಗೂ ಅದರಲ್ಲಿ ಗಾಂಧಿ–ನೆಹರೂರವರ ಪಾತ್ರವನ್ನು ವಿಶೇಷವಾಗಿ ಅಧ್ಯಯನ ಮಾಡಿದ ಬಿಪನ್ ಚಂದ್ರ ಅದಕ್ಕೆ ಒಂದು ವಿಶಿಷ್ಟ ಸ್ಥಾನವನ್ನು ನೀಡಿದ್ದಾರೆ. ಭಾರತದ ಸ್ವಾತಂತ್ರ್ಯ ಚಳುವಳಿಯೂ ಒಂದು ವಿಭಿನ್ನ ಕ್ರಾಂತಿ ಚಳುವಳಿ. ಬೂರ್ಜ್ವಾ ಪಕ್ಷವಾದರೂ ಕಾಂಗ್ರೆಸ್ ಒಂದು ಮುಕ್ತ ಆಶಯದ, ಕಾರ್ಯಸೂಚಿಯ, ದೇಶದ ವಿವಿಧ ವರ್ಗಗಳ ಆಕಾಂಕ್ಷೆಗಳನ್ನು ಪ್ರತಿನಿಧಿಸುವ ಒಂದು ವ್ಯವಸ್ಥೆಯಾಗಿತ್ತು. ಆ ಕಾರಣದಿಂದಲೇ ಗಾಂಧೀಜಿಯವರು ಜನಮೆಚ್ಚಿದ ನಾಯಕರಾದರು. ಇಟೆಲಿಯ ಮಾರ್ಕ್ಸಿಸ್ಟ್ ಚಿಂತಕ ಅಂತೋನಿಯೋ ಗ್ರಾಮ್ಷಿ ಅವರ ಒಳನೋಟವನ್ನು ಉಪಯೋಗಿಸಿಕೊಂಡು ಬಿಪನ್ ಚಂದ್ರ ಕಾಂಗ್ರೆಸ್ ಸ್ವಾತಂತ್ರ್ಯ ಚಳುವಳಿಯನ್ನು "ವಾರ್ ಅಫ್ ಪೊಸಿಶನ್" ಎಂದು ವಿವರಿಸಿದರು. ಅಂದರೆ ಚೆಸ್ ಆಟದಲ್ಲಿ ಆಟಗಾರರು ಪರಸ್ಪರ ಸೆಣಸುವಾಗ ಹೇಗೆ ಆಕ್ರಮಣಕ್ಕೆ ಅಥವಾ ರಕ್ಷಣೆಗೋಸ್ಕರ ಅನುಕೂಲಕರವಾದ ಚೌಕಗಳನ್ನು ಹಿಡಿದಿಡಲು ಪ್ರಯತ್ನಿಸುತ್ತಾರೋ ಹಾಗೆಯೇ ಸ್ವಾತಂತ್ರ್ಯ ಚಳುವಳಿಯುದ್ದಕ್ಕೂ ಕಾಂಗ್ರೆಸ್ ತಮ್ಮ ರಣನೀತಿಯನ್ನು ರೂಪಿಸಿತು. ವಸಾಹತುಶಾಹಿಯನ್ನು ವಿವಿಧ ಲಯಗಳಲ್ಲಿ ವಿರೋಧಿಸಿತು. ಅದರೊಡನೆ ಆಗಾಗ ರಾಜಿಮಾಡುವ ನೀತಿಯನ್ನು ಮಾರ್ಕ್ಸಿಸ್ಟರು ಖಂಡಿಸಿದಾಗ ಅದಕ್ಕೆ ಉತ್ತರವಾಗಿ ಬಿಪನ್ ಚಂದ್ರ 1985ರ ಇಂಡಿಯನ್ ಹಿಸ್ಟರಿ ಕಾಂಗ್ರೆಸ್ಸಿನ ಅಮೃತಸರ ಅಧಿವೇಶನದ ಸರ್ವಾಧ್ಯಕ್ಷ ಭಾಷಣದಲ್ಲಿ ("ಇಂಡಿಯನ್ ನ್ಯಾಶನಲ್ ಮೂವ್‌ಮೆಂಟ್: ಲಾಂಗ್ ಟರ್ಮ್ ಡೈನಾಮಿಕ್ಸ್") ಗಾಂಧೀಜಿಯವರ ನೇತೃತ್ವದಲ್ಲಿ ಕಾಂಗ್ರೆಸ್ ಸಾಂದರ್ಭಿಕವಾಗಿ ಮುಂದೊತ್ತುವ ಅಥವಾ ಹಿಂದೆ ಸರಿಯುವ ನೀತಿಯನ್ನು ಅನುಸರಿಸಿತು. ಯಾವುದೇ ಚಳುವಳಿಯು ಜನರ ಮನಸ್ಸನ್ನು ಅಥವಾ

ನಿಷ್ಠೆಯನ್ನು ಯಾವಾಗಲೂ ಒಂದೇ ತೀವ್ರತೆಯಲ್ಲಿ ಹಿಡಿದಿಟ್ಟುಕೊಳ್ಳಲಾಗುವುದಿಲ್ಲ. ಮೊದಲಿನ ಹುಮ್ಮಸ್ಸು ಕಮರಿ ಹೋಗುತ್ತದೆ. ಅವರಲ್ಲಿ ದಣಿವು ಕಾಣುತ್ತದೆ. ಇದನ್ನು ಗುರುತಿಸಿ, ಚಳುವಳಿಗೆ ವಿರಾಮ ಹೇಳಿ, ಜನರ ಹುಮ್ಮಸ್ಸನ್ನು ಪುನರಾವೇಶಿಸುವ ಕೆಲಸ ಮಾಡುವ ಅಗತ್ಯವನ್ನು ಗಾಂಧೀಜಿಯವರು ಕಂಡಿದ್ದರು. ಬ್ರಿಟಿಷ್ ಸರಕಾರದೊಡನೆ ನಡೆಸಿದ ಸಂಧಾನಗಳು ಸೋಲಲ್ಲ, ಬದಲಾಗಿ ಚಳುವಳಿಯ ಹೊಸ ಆಯಾಮಕ್ಕೆ ನಾಂದಿ ಎಂದು ಬಿಪನ್ ಚಂದ್ರ ಪ್ರತಿಪಾದಿಸಿದರು. "ಸ್ಟ್ರಗಲ್–ಟ್ರೂಸ್–ಸ್ಟ್ರಗಲ್" (ಎಸ್–ಟಿ–ಎಸ್) ಅಂದರೆ, "ಚಳುವಳಿ–ರಾಜಿ–ಚಳುವಳಿ". ಇದು ಗಾಂಧೀಜಿಯವರ ನಾಯಕತ್ವದಲ್ಲಿ ಕಾಂಗ್ರೆಸ್ ಅನುಸರಿಸಿದ ರಣನೀತಿ. ಇದು ಜನಪರ ಕ್ರಾಂತಿಯನ್ನು ನಿಭಾಯಿಸುವ ಒಂದು ಬಗೆ. ಚೌರಿಚೌರಾ ಘಟನೆಗೆ ಗಾಂಧೀಜಿಯವರ ಪ್ರತಿಕ್ರಿಯೆ (1922) ಅಥವಾ ಗಾಂಧಿ–ಇರ್ವಿನ್ ಒಪ್ಪಂದ (1931)ಗಳನ್ನು ಈ ರೀತಿ ಗ್ರಹಿಸುವುದು ಅವಶ್ಯ. ಸಾಂಪ್ರದಾಯಿಕ ಮಾರ್ಕ್ಸಿಸ್ಟರೆಂದಂತೆ ಇವನ್ನು ಕೇವಲ ಬೂರ್ಜ್ವಾ ವರ್ಗದ ಪುಕ್ಕಲುತನ, ಸಮಯಾನುವರ್ತಿ ನೀತಿ ಅಥವಾ ಕ್ರಾಂತಿ ವಿರೋಧಿ ನಿಲುವು ಎನ್ನುವುದು ತಪ್ಪು. ಬದಲಾಗಿ ಇದು ಒಂದು ವಿಭಿನ್ನ ರೀತಿಯ ಕ್ರಾಂತಿ ಮತ್ತು ಅದರ ನಿರ್ವಹಣೆ. ಈ ಪ್ರತಿಪಾದನೆ ಬಿಪನ್ ಚಂದ್ರ ಅವರು ಅವರ ಸಂಗಡಿಗರೊಡನೆ ಸೇರಿ ಬರೆದ ಇಂಡಿಯಾಸ್ ಸ್ಟ್ರಗಲ್ ಫೊರ್ ಇಂಡಿಪೆಂಡೆನ್ಸ್: *1857–1947* ಎಂಬ ಜನಪ್ರಿಯ ಪುಸ್ತಕದಲ್ಲೂ ಮೂಡಿಬಂತು (1988).

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಎಡಪಂಥೀಯ ವಿಚಾರಗಳ ಪಾತ್ರ, ಸೋಶಿಯಲಿಸ್ಟ್ ಸಿದ್ಧಾಂತವು ನೆಹರೂ, ಸುಭಾಸ್ ಚಂದ್ರ ಬೋಸ್, ಜಯಪ್ರಕಾಶ ನಾರಾಯಣ ಮೊದಲಾದ ಕಾಂಗ್ರೆಸ್ ಧುರೀಣರ ಮೇಲೆ ಬೀರಿದ ಪ್ರಭಾವ, ಅದಕ್ಕೆ ಗಾಂಧೀಜಿಯ ಪ್ರತಿಕ್ರಿಯೆ ಹಾಗೂ ಅದರಿಂದ ಕಾಂಗ್ರೆಸ್ ಕಾರ್ಯಕ್ರಮಗಳಲ್ಲಾದ ಬದಲಾವಣೆಗಳ ಬಗ್ಗೆ ಬಿಪನ್ ಚಂದ್ರ ವಿಸ್ತಾರವಾಗಿ ಅಧ್ಯಯನ ನಡೆಸಿದರು. ಕ್ರಾಂತಿಕಾರಿ ಭಗತ್ ಸಿಂಗ್ ಕೂಡ ಸೋಶಿಯಲಿಸ್ಟ್ ಸಿದ್ಧಾಂತ ಹಾಗೂ ಕಾರ್ಯಕ್ರಮಗಳಿಗೆ ಮಾರುಹೋದದ್ದು ಅವರ ಬರೆವಣಿಗೆಗಳಲ್ಲಿ ವೇದ್ಯವಾಗುತ್ತದೆ. ಸೋವಿಯಟ್ ರಶ್ಯಾದ ಕ್ರಾಂತಿ ಮತ್ತು ಕಮ್ಯೂನಿಸ್ಟ್ ಕಾರ್ಯಕ್ರಮಗಳಿಂದ ಪ್ರೇರಣೆ ಪಡೆದ ನೆಹರೂ ಮುಂದೆ ಸ್ಟಾಲಿನ್–ಮಾರ್ಕ್ಸಿಸಮ್‌ನ ಪ್ರಭಾವದಿಂದ ಹೊರಬಂದು ಪ್ರಜಾಪ್ರಭುತ್ವದ ಬುನಾದಿಯಲ್ಲಿ ಸಮಾಜವಾದಿ ಕಲ್ಪನೆ ಮತ್ತು ಕಾರ್ಯಕ್ರಮಗಳನ್ನು ಬೆಳೆಸುವ ಪ್ರಯತ್ನವನ್ನು ಮಾಡಿದ್ದು ಸ್ವತಂತ್ರ ಭಾರತವನ್ನು ಹೊಸದಿಕ್ಕಿನತ್ತ ಕೊಂಡೊಯ್ಯಲು ಸಾಧ್ಯವಾಯಿತು. ಗಾಂಧೀಜಿಯವರ ಅಚ್ಚುಮೆಚ್ಚಿನ ಅನುಯಾಯಿಯಾಗಿದ್ದರೂ ನೆಹರೂ ತನ್ನ ಸ್ವಂತಿಕೆಯನ್ನು ಎಂದೂ ಕಳಕೊಳ್ಳಲಿಲ್ಲ. ಗಾಂಧೀಜಿಯವರು ನೆಹರೂರವರ ಮೇಲೆ ಪ್ರಭಾವ ಬೀರಿದಂತೆ ನೆಹರೂ ಸಹ ಗಾಂಧೀಜಿಯವರ ಮೇಲೆ ಸಾಕಷ್ಟು ಪ್ರಭಾವ ಬೀರಿದರು. ಭಾರತದ ಸ್ವಾತಂತ್ರ್ಯ ಚಳುವಳಿ ಹಾಗೂ ಅದರ ಮುಂಚೂಣಿಯಲ್ಲಿದ್ದ ಕಾಂಗ್ರೆಸ್ ಈ ರೀತಿಯ ಮುಕ್ತ ಮನೋಭಾವ ಹೊಂದಿದ್ದುದರಿಂದ ಇಲ್ಲಿ ಪ್ರಜಾಪ್ರಭುತ್ವದ ಬೆಳೆವಣಿಗೆಗೆ ಸಹಾಯವಾಯಿತು, ಎಂಬುದು ಬಿಪನ್ ಚಂದ್ರ ಅವರ ಅಭಿಪ್ರಾಯ. ಹಾಗೆಂದು ಕಾಂಗ್ರೆಸ್ ಸಾರಥ್ಯವನ್ನು ಒಪ್ಪಿಕೊಂಡರೂ ಚಳುವಳಿಯು ಜನಪ್ರಿಯವಾಗಿದ್ದು, ದೇಶದ ಎಲ್ಲಾ ವರ್ಗಗಳನ್ನು ಒಟ್ಟು ಸೇರಿಸಿ ಮುಂದುವರಿಸುವ ಪ್ರಯತ್ನ ಮಾಡಿತ್ತು. ಕಾರ್ಮಿಕರು, ರೈತಜನ, ಬುಡಕಟ್ಟು ಜನಾಂಗಗಳು, ಮಹಿಳೆಯರು, ವಿದ್ಯಾರ್ಥಿಗಳು, ಮತ್ತಿತರ ಸಮಾಜದ ಘಟಕಗಳು ಚಳುವಳಿಯಲ್ಲಿ

ಸಕ್ರಿಯವಾಗಿ ಭಾಗವಹಿಸಿದರು. ವಸಾಹತುಶಾಹಿ ಆಳ್ವಿಕೆಯ ವಿರುದ್ಧ ಅವರ ಆಕ್ಷೇಪ ಬೇರೆಬೇರೆ ಆಗಿದ್ದರೂ ಚಳುವಳಿಯು ನಡೆದದ್ದು ಬಹುತೇಕ ಕಾಂಗ್ರೆಸ್ ಧ್ವಜದಡಿಯಲ್ಲಿ ಅಂದರೆ ಗಾಂಧೀಜಿ ನೇತೃತ್ವದ ಕಾಂಗ್ರೆಸ್ ದೇಶದ ಆಕ್ರೋಶ, ಆಕಾಂಕ್ಷೆಗಳನ್ನು ಬ್ರಿಟಿಷ್ ಆಳರಸರಿಗೆ ತಲುಪಿಸುವ ಸಾಧನವಾಯಿತು ಎಂದು ಬಿಪನ್ ಚಂದ್ರ ವಾದಿಸುತ್ತಾರೆ. 1983–1987ರ ಅವಧಿಯಲ್ಲಿ ಅವರು ಸ್ವಾತಂತ್ರ್ಯ ಚಳುವಳಿಯ ಮೌಖಿಕ ಇತಿಹಾಸವನ್ನು ಕಟ್ಟುವ ಪ್ರಯತ್ನವನ್ನು ಮಾಡಿ ಎಲ್ಲಾ ವರ್ಗದ ಹಾಗೂ ರಾಜಕೀಯ ಪಕ್ಷದ ಸುಮಾರು 3000 ಸ್ವಾತಂತ್ರ್ಯಯೋಧರನ್ನು ಭೇಟಿಯಾಗಿ ಅವರ ನೆನಪು, ವಿಚಾರಗಳನ್ನು ದಾಖಲಿಸಿಕೊಂಡರು. ಈ ಅನುಭವ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ಅವರ ಕಲ್ಪನೆಯನ್ನು ಬಹಳಷ್ಟು ವಿಶಾಲಗೊಳಿಸಿದ್ದಲ್ಲದೆ ಹೆಚ್ಚು ತಿಳಿಯಾಗಿಸಿತು. ಭಾರತದಲ್ಲಿ ವಸಾಹತುಶಾಹಿಯ ವರಸೆ ಮತ್ತು ಬೆಳವಣಿಗೆ ಹಾಗೂ ಅದರ ವಿರುದ್ಧ ನಡೆದ ರಾಷ್ಟ್ರೀಯ ಚಳುವಳಿಯ ವಿವಿಧ ಆಯಾಮಗಳನ್ನು ಬಿಪನ್ ಚಂದ್ರ ತಮ್ಮ ಅನೇಕ ಪ್ರಬಂಧಗಳಲ್ಲಿ ಹಿಡಿದಿಟ್ಟಿದ್ದಾರೆ. ಅವುಗಳು ಅವರ ನ್ಯಾಶನಲಿಸಂ ಎಂಡ್ ಕೊಲೋನಿಯಲಿಸಂ ಇನ್ ಮಾಡರ್ನ್ ಇಂಡಿಯಾ (1979), ಎಸ್ಸೇಸ್ ಆನ್ ಇಂಡಿಯನ್ ನ್ಯಾಶನಲಿಸಂ (1993), ಐಡಿಯಾಲೊಜಿ ಎಂಡ್ ಪೊಲಿಟಿಕ್ಸ್ ಇನ್ ಮಾಡರ್ನ್ ಇಂಡಿಯಾ (1994), ಎಸ್ಸೇಸ್ ಆನ್ ಕೊಲೋನಿಯಾಲಿಸಂ (1999) ಮೊದಲಾದ ಗ್ರಂಥಗಳಲ್ಲಿ ಲಭ್ಯವಿವೆ. 2012ರಲ್ಲಿ ಪ್ರಕಟವಾದ ರೈಟಿಂಗ್ಸ್ ಅಫ್ ಬಿಪನ್ ಚಂದ್ರ: ದಿ ಮೇಕಿಂಗ್ ಅಫ್ ಮಾಡರ್ನ್ ಇಂಡಿಯಾ ಫ್ರಮ್ ಮಾರ್ಕ್ಸ್ ಟು ಗಾಂಧಿ ಎಂಬ ಅವರ ಪುಸ್ತಕದಲ್ಲೂ ದೊರಕುತ್ತವೆ.

ಸ್ವಾತಂತ್ರ್ಯ ಚಳುವಳಿಯ ಬಗ್ಗೆ ಬಿಪನ್ ಚಂದ್ರ ಅವರ ನಿಲುವು ವಸಾಹತುಶಾಹಿಯನ್ನು ಸೂಕ್ಷ್ಮವಾಗಿ ಅನುಮೋದಿಸಿ, ರಾಷ್ಟ್ರೀಯತೆಯ ಮಹತ್ವವನ್ನು ಅಷ್ಟೇ ಸೂಕ್ಷ್ಮವಾಗಿ ಅಲ್ಲಗಳೆದು ಎಪ್ಪತ್ತರ ದಶಕದಲ್ಲಿ ಸಾಕಷ್ಟು ವಿಜೃಂಭಿಸಿದ "ಕೇಂಬ್ರಿಜ್ ಸ್ಕೂಲ್"ಅನ್ನು ವಿರೋಧಿಸಿತು. ಹಾಗೆಯೇ ಎಂಭತ್ತರ ದಶಕದಲ್ಲಿ ಜನಪ್ರಿಯವಾದ "ಸಬಾಲ್ಟರ್ನ್ ಪಂಥ"ವನ್ನೂ ಅವರು ಮುಕ್ತವಾಗಿ ಟೀಕಿಸಿದರು. ಇವೆರಡೂ ವಸಾಹತುಶಾಹಿಯ ಕ್ರೌರ್ಯ ಮತ್ತು ಅದು ಮಾಡಿದ ವ್ಯಾಪಕ ಹಾನಿಯನ್ನು ಮುಚ್ಚಿಹಾಕುವಂತೆ ಮಾಡುತ್ತವೆ. ಒಬ್ಬರಿಗೆ ರಾಷ್ಟ್ರೀಯ ಚಳುವಳಿಯು ವೈಯಕ್ತಿಕ ಏಳಿಗೆಯ ಏಣಿಯಾದರೆ ಇನ್ನೊಬ್ಬರಿಗೆ ಅದು ಕೇವಲ ಪ್ರತಿಷ್ಠಿತರ ಕಥನವಾಗಿ ಕಂಡುಬರುತ್ತದೆ. ಸಬಾಲ್ಟರ್ನ್ ಇತಿಹಾಸ ಕೆಳಸ್ತರದವರ ಇತಿಹಾಸವನ್ನು ಬರೆಯುವ ನೆವದಲ್ಲಿ ರಾಷ್ಟ್ರೀಯ ಚಳುವಳಿಯನ್ನು ಛಿದ್ರಗೊಳಿಸಿ, ಅದರ ಸಮಗ್ರ ಚಿತ್ರಣವನ್ನೇ ಅಳಿಸಿಹಾಕುತ್ತವೆ, ಎಂದು ಬಿಪನ್ ಚಂದ್ರ ವಾದಿಸಿದರು. ಮಾರ್ಕ್ಸಿಸ್ಟರ ವರ್ಗವಿಶ್ಲೇಷಣೆಯ ನೆಲೆಯಲ್ಲೂ, ರಾಷ್ಟ್ರೀಯವಾದಿಗಳ ಸಮಗ್ರತೆಯ ದೃಷ್ಟಿಯಲ್ಲೂ "ಸಬಾಲ್ಟರ್ನ್ ಇತಿಹಾಸಕಾರ"ರ ಪ್ರಯತ್ನ ಸಂಪೂರ್ಣವಾಗಿ ಸೋಲುತ್ತದೆ ಎಂದರು. ಮುಂದೆ ಸಬಾಲ್ಟರ್ನ್ ಇತಿಹಾಸದಲ್ಲಿ ಸಬಾಲ್ಟರ್ನ್‌ಗಳೇ ಮರೆಯಾದದ್ದು, ಅಂತಹ ಇತಿಹಾಸ ರಚನೆ ಆಧುನಿಕೋತ್ತರವಾದಕ್ಕೆ ಎರವಾದದ್ದು ಬೇರೆ ಮಾತು.

* * *

ಬ್ರಿಟಿಷ್ ಆಳ್ವಿಕೆಯಲ್ಲಿ ಹಾಗೂ ಅದರ ವಿರುದ್ಧ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಬೆಳೆದು ವಿಜೃಂಭಿಸಿದ ಕೋಮುವಾದದ ಬಹುರೂಪಗಳನ್ನು ಬಿಪನ್ ಚಂದ್ರ ವಿಸ್ತಾರವಾಗಿ ಅಧ್ಯಯನ ಮಾಡಿದರು. 1969ರಲ್ಲಿ ತಮ್ಮ ಸಹೋದ್ಯೋಗಿಗಳಾದ ರೊಮಿಲಾ ಥಾಪರ್

ಮತ್ತು ಹರ್ಬನ್ಸ್ ಮುಖಿಯಾ ಅವರೊಡನೆ ಸೇರಿ ಬಿಪನ್ ಚಂದ್ರ ಬರೆದ ಕಮ್ಯೂನಲಿಸಮ್ ಎಂಡ್ ದಿ ರೈಟಿಂಗ್ ಅಫ್ ಇಂಡಿಯನ್ ಹಿಸ್ಟರಿ ಕೃತಿಯಲ್ಲಿ ಇತಿಹಾಸವು ಹೇಗೆ ರಾಜಕೀಯಕ್ಕೆ ಅಡಿಯಾಳಾಗುತ್ತದೆ, ವಿಲಕ್ಷಣ, ಅನಿಷ್ಟಕಾರಿ ಸತ್ಯಗಳನ್ನು ಸೃಷ್ಟಿಸುತ್ತದೆ, ಸಮಾಜದ ಮನಸ್ಸನ್ನು ಕಲುಷಿತಗೊಳಿಸುತ್ತದೆ ಎಂದು ವಿವರಿಸಿದರು. ಮುಂದೆ ರಾಷ್ಟ್ರೀಯ ಚಳುವಳಿಯಲ್ಲಿ ಕೋಮುವಾದದ ಸ್ವರೂಪ, ಅದರಲ್ಲಿ ಮುಸ್ಲಿಮ್, ಹಿಂದೂ ಮತ್ತು ಸಿಖ್ ಧರ್ಮಗಳ ಹೆಸರಿನಲ್ಲಿ ನಡೆದ ರಾಜಕೀಯ, ಕೋಮು ಗಲಭೆಗಳು – ಇವೆಲ್ಲವೂ ರಾಷ್ಟ್ರೀಯತೆಯನ್ನು ಯಾವರೀತಿಯಲ್ಲಿ ದಾರಿ ತಪ್ಪಿಸಿತು, ಕ್ಷೀಣಗೊಳಿಸಿತು, ಅಥವಾ ಅದರ ಖಚಿತ ಪ್ರಕಟಣೆಗೆ ಅಡ್ಡಿಯಾಯಿತು ಎಂದು ತಿಳಿಸಿದರು. ಅನೇಕ ಪ್ರಬಂಧಗಳಲ್ಲಿ ಹೊರಬಂದ ಈ ವಿಚಾರಗಳು ಅವರ ಪುಸ್ತಕ ಕಮ್ಯೂನಲಿಸಮ್ ಇನ್ ಮಾಡರ್ನ್ ಇಂಡಿಯಾದಲ್ಲಿ ಪ್ರಕಟವಾಯಿತು (1984). ಕೋಮುವಾದ ಧರ್ಮ-ಧರ್ಮಗಳೊಳಗಿನ ಸಂಘರ್ಷವಲ್ಲ, ಧರ್ಮದ ಹೆಸರಿನಲ್ಲಿ ನಡೆಯುವ ರಾಜಕೀಯ ಸಂಘರ್ಷ. ನಮ್ಮ ಧರ್ಮಗಳು ಬೇರೆಯಾದಾಗ ನಮ್ಮ ಪ್ರಾಪಂಚಿಕ ಹಿತಾಸಕ್ತಿಗಳೂ ಬೇರೆಯಾಗುತ್ತವೆ, ನಮ್ಮ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಒಲವುಗಳು ಭಿನ್ನವಾಗುತ್ತವೆ, ಅವುಗಳೊಳಗೆ ಸಂಘರ್ಷಗಳು ಏರ್ಪಡುತ್ತವೆ, ಎಂದು ನಂಬಿ ವ್ಯವಹರಿಸಿದಾಗ ಕೋಮುವಾದ ಚಾಲನೆಗೊಳ್ಳುತ್ತದೆ. ಇದೊಂದು ಹುಸಿಪ್ರಜ್ಞೆ. ಇದನ್ನು ದಿಟವೆಂದು ಸಮಾಜವು ನಂಬುವಂತೆ ಅನೇಕ ಶಕ್ತಿಗಳು ಕೆಲಸಮಾಡುತ್ತವೆ. ವಿವಿಧ ಧರ್ಮಗಳ ಸಿದ್ಧಾಂತ ಆಚರಣೆಗಳಲ್ಲಿ ಭಿನ್ನತೆ ಹಿಂದೆಯೂ ಇತ್ತು. ಅವುಗಳೊಳಗೆ ಕಲಹ, ಯುದ್ಧಗಳು ನಡೆದದ್ದನ್ನೂ ಇತಿಹಾಸ ಪುಟಗಳು ಸಾಕಷ್ಟು ಅರುಹುತ್ತವೆ. ಆದರೆ ಕೋಮುವಾದವು ಆಧುನಿಕ ಕಾಲದ ಸಿದ್ಧಾಂತ, ಆಚರಣೆ ಹಾಗೂ ವಿದ್ಯಮಾನ. ಇದನ್ನು ಹುಟ್ಟುಹಾಕುವಲ್ಲಿ ಬ್ರಿಟಿಷರ ಆಳ್ವಿಕೆಯ ನೀತಿ, ಇತಿಹಾಸದ ಕಲ್ಪನೆ ಮತ್ತು ಬರೆವಣಿಗೆಗಳು ಬಹಳಷ್ಟು ಕೆಲಸಮಾಡಿವೆ. ಬ್ರಿಟಿಷ್ ಇತಿಹಾಸಕಾರರು ಸೃಷ್ಟಿಸಿದ ನಮ್ಮ ಇತಿಹಾಸದ ಚಿತ್ರಣಗಳು ಗಟ್ಟಿಯಾಗಿ ನೆಲೆಯೂರಿ ರಾಷ್ಟ್ರೀಯತೆಯೊಳಗೆ ನುಸುಳಿ ಬಂದವು. ಧರ್ಮಗಳು ಭಾರತೀಯರಿಗೆ ನಿರ್ದಿಷ್ಟ ಅಸ್ಮಿತೆಯನ್ನು ನೀಡಿದೆ, ಅದರಿಂದ ಸಮಾಜದಲ್ಲಿ ವಿಭಜನಾತ್ಮಕ ಸನ್ನಿವೇಶಗಳು ಹುಟ್ಟಿಕೊಂಡಿವೆ ಎಂದು ಬ್ರಿಟಿಷ್ ಇತಿಹಾಸಕಾರರು ಮತ್ತು ಆಡಳಿತಗಾರರು ಸೂಚಿಸಿದರು. ಅವು ಇತಿಹಾಸದುದ್ದಕ್ಕೂ ಕಾಣುವಂಥವು; ಆದುದರಿಂದ ಹಿಂದೂ-ಮುಸ್ಲಿಮ್ ವಿವಾದ ಅಥವಾ ಘರ್ಷಣೆಗಳು ಬ್ರಿಟಿಷ್ ಆಳ್ವಿಕೆಯ ಸೃಷ್ಟಿಯಲ್ಲ ಎಂದೂ, ಬ್ರಿಟಿಷ್ ಬರೆವಣಿಗೆಗಳು ಪ್ರತಿಪಾದಿಸಿದವು. ಇತಿಹಾಸ ಬರೆವಣಿಗೆಗಳಲ್ಲದೆ ಬದಲಾಗುತ್ತಿರುವ ರಾಜಕೀಯ ಮತ್ತು ಆರ್ಥಿಕತೆಗಳೂ ಕೋಮುವಾದಕ್ಕೆ ಪ್ರೇರಕವಾದವು. ಈ ಸಂದರ್ಭಗಳಲ್ಲಿ ಸಮಾಜದ ವಿವಿಧ ಘಟಕಗಳ ಆಕಾಂಕ್ಷೆಗಳು, ಪೈಪೋಟಿಗಳು ಧಾರ್ಮಿಕ ಸಂಘರ್ಷಗಳ ರೂಪ ಪಡೆದು ಅವುಗಳಿಗೆ ಹೆಚ್ಚು ಉದ್ವಿಗ್ನ ರೂಪವನ್ನು ನೀಡಿದವು. ಒಂದು ಕೋಮುವಾದವು ಇನ್ನೊಂದನ್ನು ಪ್ರಚೋದಿಸಿದ್ದಲ್ಲದೆ, ಅದನ್ನು ಸಮರ್ಥನೀಯವಾಗಿಸಿತು. ಯಾರೂ ತನ್ನನ್ನು ಕೋಮುವಾದಿ ಎಂದು ಒಪ್ಪಿಕೊಳ್ಳಲು ತಯಾರಿಲ್ಲ. ಎಲ್ಲರೂ ತಮ್ಮ ವಿರುದ್ಧವಾಗಿರುವ ಕೋಮುವಾದದಿಂದ ರಕ್ಷಿಸಿಕೊಳ್ಳಲು ಮಾಡುವ ಕೆಲಸವಷ್ಟೆ ಎಂದು ವಾದಿಸುವವರು. ಈ ಸ್ಪರ್ಧಾತ್ಮಕ ಕೋಮುವಾದವು ರಾಷ್ಟ್ರೀಯ ಚಳುವಳಿಗೆ, ಅದರ ಆಕಾಂಕ್ಷೆಗಳಿಗೆ ಅಡ್ಡಿಯನ್ನುಂಟುಮಾಡಿತು, ಎಂಬುದು ಬಿಪನ್ ಚಂದ್ರ ಅವರ ಅಭಿಪ್ರಾಯ.

ತಮ್ಮ ಧರ್ಮವನ್ನು ಆದರಿಸಿ ಆಚರಿಸುವುದು ಕೋಮುವಾದವಲ್ಲ. ಅದು ವೈಯಕ್ತಿಕ ಪ್ರಪಂಚಕ್ಕೆ ಸೇರಿದ್ದು; ಅದಕ್ಕೆ ರಾಜಕೀಯ ಆಯಾಮ ಇರಬೇಕೆಂದಿಲ್ಲ: ಧರ್ಮಶ್ರದ್ಧೆಯುಳ್ಳವನು

ಕೋಮುವಾದಿಯಾಗಿರಬೇಕಿಂದಿಲ್ಲ, ಎಂದು ಬಿಪನ್ ಚಂದ್ರ ವಾದಿಸಿದರು. ಗಾಂಧೀಜಿಯವರು ಎಷ್ಟೋಬಾರಿ ಧರ್ಮವಿಲ್ಲದ ರಾಜಕೀಯವು ಕುರುಡು, ಆತ್ಮಸತ್ತ ವ್ಯವಹಾರ, ಎಂಬ ಮಾತನ್ನು ಹೇಳಿದ್ದರು. ತಮಗೆ ರಾಮನಾಮವು ಯಾವಾಗಲೂ ಸಾಂತ್ವನವನ್ನು ನೀಡಿದೆ ಎನ್ನುತ್ತಿದ್ದರು. ಭಾರತಕ್ಕೆ ರಾಮರಾಜ್ಯದ ಕನಸಿರಬೇಕು ಎಂದರು. ಇದು 'ಸೆಕ್ಯುಲರ್' ಆದರ್ಶಗಳಿಗೆ ವಿರೋಧ ಎಂದು ಕೆಲವರಿಗೆ ಕಂಡುಬಂತು. ಕೆಲವು ಮುಸ್ಲಿಮರು ಇದನ್ನು ಹಿಂದೂವಾದ ಎಂದರು. ಇವರನ್ನು ಹಿಂಬಾಲಿಸಿ ಹೋದರೆ ಹಿಂದೂಗಳು ರೂಪಿಸಿದ ಖೆಡ್ಡಾಕ್ಕೆ ಬೀಳುವುದೇ ಖಂಡಿತ, ಎಂದೂ ಅಂದರು. ಆದರೆ ಈ ಎರಡೂ ನಿಲುವುಗಳು ಗಾಂಧೀಜಿಯವರ ವಿಚಾರಗಳನ್ನು ಸರಿಯಾಗಿ ಅರ್ಥೈಸದೆ ವಿಕೃತಿಗೊಳಿಸಿದ ಫಲ ಎಂದು ಬಿಪನ್ ಚಂದ್ರ ವಾದಿಸಿದರು. ಗಾಂಧೀಜಿಯರ ಧರ್ಮದ ಪರಿಕಲ್ಪನೆ ನಿರ್ದಿಷ್ಟ ಮತಧರ್ಮಗಳಿಗೆ ಸೀಮಿತವಾಗಿರಲಿಲ್ಲ. ಧರ್ಮಕ್ಕೆ ಮಾನವೀಯತೆಯ ವಿಶಾಲ ಅರ್ಥವನ್ನು ನೀಡಿ ಅದನ್ನು ರಾಜಕೀಯದ, ಸಮಾಜದ ಹಾಗೂ ಎಲ್ಲಾ ಜನರ ಒಳಿತನ್ನು ಸಾಧಿಸಲು ಬಳಸಬೇಕು ಎಂದು ನಂಬಿದ್ದರು. "ರಾಮರಾಜ್ಯ ಎಂದರೆ ಹಿಂದೂ ರಾಜ್ಯವಲ್ಲ. ಅದು ನೈತಿಕತೆಯ, ಮಾನವೀಯತೆಯ ಹಾಗೂ ಸಮಾನತೆಯ ರಾಜ್ಯ. ಅದು ದೇವರು ಮೆಚ್ಚಿದ ರಾಜ್ಯ. ನನಗೆ ರಾಮ-ರಹೀಮರಿಬ್ಬರೂ ಒಂದೇ" ಎಂದು ಗಾಂಧೀಜಿಯವರು ಮುಸ್ಲಿಮರಿಗೆ ಆಶ್ವಾಸನೆಯನ್ನಿತ್ತಿದ್ದರು. ಆದರೆ ನಿರ್ದಯ ಮೇಲಾಟದ ರಾಜಕೀಯದಲ್ಲಿ ಪರಸ್ಪರ ಸಂಶಯವೇ ಆವರಿಸಿರುವಾಗ ಇಂತಹ ಆಶ್ವಾಸನೆ ಹೆಚ್ಚು ಪರಿಣಾಮವನ್ನು ಬೀರಲಿಲ್ಲ ಎಂದೇ ಹೇಳಬೇಕು. ಹಿಂದೂ-ಮುಸ್ಲಿಮ್ ಏಕತೆಯ ಮಂತ್ರವನ್ನು ಗಾಂಧೀಜಿ ಸದಾ ಜಪಿಸುತ್ತಿದ್ದದ್ದು ಇಲ್ಲದ ಐಕ್ಯತೆಯನ್ನು ಸಾಧಿಸುವ ಸಲುವಾಗಿ. ಖಿಲಾಫತ್ ಚಳುವಳಿಯ ಕಾಲಕ್ಕೆ ಅದನ್ನು ಸಾಧಿಸಿಕೊಂಡೆ ಎಂಬ ಅವರ ಭ್ರಮೆ ಹೆಚ್ಚು ಕಾಲ ಉಳಿಯಲಿಲ್ಲ ಎಂಬುದು ಕಹಿ ಸತ್ಯವೇ. ಆದರೆ ಗಾಂಧೀಜಿಯ ಗಾಢನಂಬಿಕೆ ಕರಗಿಹೋಗಲಿಲ್ಲ. ಅವರ ಪ್ರಯತ್ನ ದಣಿವು ಕಾಣಲಿಲ್ಲ. ಹಾಗೆಂದು ರಾಷ್ಟ್ರೀಯವಾದದಲ್ಲಿ ಸೇರಿಹೋದ ಸಂಕುಚಿತ, ರಾಜಕೀಯ ನೊಗಕ್ಕೆ ಕಟ್ಟಿದ ಧಾರ್ಮಿಕತೆ ಗಾಂಧೀಜಿಯವರ ವಿಚಾರವನ್ನು ತಿರಸ್ಕರಿಸಿ ವ್ಯವಹರಿಸಿದ್ದು, ಅದರಿಂದ ಕೋಮುವಾದಕ್ಕೆ ಚಾಲನೆ ಸಿಕ್ಕಿದ್ದು, ಅದರಿಂದ ದೇಶದಲ್ಲಿ ಮತೀಯ ವೈಷಮ್ಯ ಉಲ್ಬಣಗೊಂಡಿದ್ದು ಹಾಗೂ ದೇಶದ ವಿಭಜನೆಯಲ್ಲಿ ಕೊನೆಗೊಂಡದ್ದು ನಮಗೆಲ್ಲಾ ತಿಳಿದ ವಿಚಾರ. ಆದರೆ ಇದಕ್ಕೆಲ್ಲಾ ಗಾಂಧೀಜಿಯವರೇ ಹೊಣೆ ಎಂಬ ಆಪಾದನೆಯನ್ನು ಕೋಮುವಾದದ ಪ್ರವರ್ತಕರೆಲ್ಲರೂ ಮಾಡಿದರು. ದೇಶದ ವಿಭಜನೆಗೆ ಮುಸ್ಲಿಮ್ ಕೋಮುವಾದ ಹಾಗೂ ಜಿನ್ನಾರಂಥ ಅವರ ಧುರೀಣರ ಮೊಂಡುತನ, ಕಾಂಗ್ರೆಸ್ ನಾಯಕರ ದೌರ್ಬಲ್ಯ ಮತ್ತು ಸ್ವಪ್ರಯೋಜನಾಸಕ್ತಿ ಮತ್ತು ಬ್ರಿಟಿಷ್ ಆಳರಸರ ಹುನ್ನಾರವೇ ಕಾರಣ ಎಂಬ ಪ್ರಚಲಿತ ಆರೋಪಗಳನ್ನು ವಿಶ್ಲೇಷಿಸುತ್ತಾ ಅವುಗಳಲ್ಲಿ ಅಡಕವಾದ ಅರ್ಧಸತ್ಯಗಳನ್ನು ಪೂರ್ತಿಯಾಗಿ ನಿರಾಕರಿಸದೆ, ದೇಶಕ್ಕೆ ಎರಗಿದ ನಿಜವಾದ ದುರಂತ ಕೋಮುವಾದ; ಅದರಲ್ಲಿ ಇನ್ನೊಬ್ಬರನ್ನು ಆಪಾದಿಸುವವರೆಲ್ಲರೂ ಸಾಕಷ್ಟು ಪಾಲ್ಗೊಂಡವರೇ. ದೇಶದ ವಿಭಜನೆ ಹಾಗೂ ಅದರೊಡನೆ ನಡೆದ ವ್ಯಾಪಕ, ವಿಕೃತ ಹಿಂಸಾಚಾರಗಳು ಕೋಮುವಾದದ ವಿಷಫಲ. ಕೋಮುವಾದವನ್ನು ಕಾರ್ಯತಃ ಒಪ್ಪಿಕೊಂಡು ಅದರ ವಿಷಫಲವನ್ನು ಮಾತ್ರ ನಿರಾಕರಿಸುವುದು ವಿಕೃತ ತರ್ಕ ಎಂದು ಬಿಪನ್ ಚಂದ್ರ ಅಭಿಪ್ರಾಯಪಟ್ಟರು.

ಕೋಮುವಾದ ಮತ್ತು ಧರ್ಮನಿರಪೇಕ್ಷತೆಗಳ ಬಗ್ಗೆ ಚರ್ಚಿಸುವಾಗ ಬಿಪನ್ ಚಂದ್ರ ಅವರು ನಿರ್ದಿಷ್ಟ ನಿಲುವನ್ನು ಹೊಂದಿದ್ದರು. ಕಾಂಗ್ರೆಸ್ ಕೋಮುವಾದದ ವಿರೋಧವಾಗಿ ಸೆಣಸಿತು ಎಂಬ ಅವರ ಮಾತು ಅದರ ಕೆಲವು ಹಿರಿಯ ಧೀಮಂತ ಧುರೀಣರ ಬಗ್ಗೆ ಸರಿ ಎಂದು ಕಂಡರೂ ಅದು ನಿರ್ವಿವಾದವೆಂದು ತಿಳಿಯುವುದು ಸ್ವಲ್ಪ ಕಷ್ಟವೇ. ಭಾರತದ ರಾಷ್ಟ್ರೀಯತೆಯ ಆಶಯ ಏನೇ ಇರಲಿ, ಅದು ಸಂಪೂರ್ಣ 'ಸೆಕ್ಯುಲರ್' ಹಾದಿಯಲ್ಲಿ ಮುಂದುವರಿಯಿತು ಎನ್ನುವುದು ಸತ್ಯಕ್ಕೆ ದೂರವೇ. ಸ್ವಾತಂತ್ರ್ಯ ಚಳುವಳಿಯಲ್ಲಿ ಧರ್ಮಕೇಂದ್ರಿತ ರಾಷ್ಟ್ರೀಯತೆ ತನ್ನ ಇರುವನ್ನು ಘೋಷಿಸುತ್ತಲೇ ಇತ್ತು. ಅದರಲ್ಲಿ ಮುಸ್ಲಿಮ್ ಲೀಗ್, ಹಿಂದೂ ಮಹಾಸಭಾ, ರಾಷ್ಟ್ರೀಯ ಸ್ವಯಂ ಸೇವಕ ಸಂಘ ಮೊದಲಾದ ಘಟಕಗಳ ಸಿದ್ಧಾಂತಗಳನ್ನು ಒಪ್ಪದೆ ಅವುಗಳನ್ನು ಕೋಮುವಾದ ಎಂದು ತಿರಸ್ಕರಿಸಿದರೂ ಸೆಕ್ಯುಲರ್ ರಾಷ್ಟ್ರೀಯತೆಯು ಅದರ ಪ್ರಭಾವವನ್ನು ಅಲ್ಲಗಳೆಯಲಾಗಲಿಲ್ಲ. 'ರಾಷ್ಟ್ರೀಯ' ಎಂದು ಹಣೆಪಟ್ಟಿಹೊತ್ತ ಇತಿಹಾಸ ಬರೆವಣಿಗೆಗಳಲ್ಲಿ ಹಿಂದೂ ಪಕ್ಷಪಾತವನ್ನು ಕಾಣಲಿರಲು ಅಸಾಧ್ಯ. ಹಿಂದಿ-ಉರ್ದುಗಳ ವಿವಾದಗಳಲ್ಲಿ ಅಥವಾ ಗೋರಕ್ಷಣೆಯ ಪ್ರಶ್ನೆ ಎದ್ದಾಗ ಭಾವನಾತ್ಮಕ ನೆಲೆಯ ಪ್ರತಿಕ್ರಿಯೆಗಳನ್ನು ಬದಿಗಿರಿಸಲು ಸುಲಭವಾಗಿರಲಿಲ್ಲ. ಮುಸ್ಲಿಮ್ ಲೀಗಿನ ರಾಜಕೀಯವನ್ನು ಕೋಮುವಾದವೆಂದು ನಾವೆಷ್ಟು ಹಳಿದರೂ ಅದರ ದೃಷ್ಟಿಯಲ್ಲಿ ಅದು ಧರ್ಮಕೇಂದ್ರಿತ ರಾಷ್ಟ್ರೀಯತೆಯೇ ಆಗಿತ್ತು. ಧರ್ಮವಿಲ್ಲದೆ ರಾಷ್ಟ್ರೀಯತೆ ಇಲ್ಲ ಎಂಬ ಅದರ ವಾದವನ್ನು ನಿರಾಕರಿಸಿದವರೆಲ್ಲರೂ ಅದರ ಶಕ್ತಿಯನ್ನು ಒಪ್ಪಿಕೊಳ್ಳುವ ಸನ್ನಿವೇಶ ಒದಗಿ ಬಂದಿತ್ತು.

* * *

ಅನೇಕ ಧರ್ಮಗಳ ದೇಶವಾದ ಭಾರತದಲ್ಲಿ ಧರ್ಮನಿರಪೇಕ್ಷೆಯು ಒಂದು ಉದಾತ್ತವೂ ಸಂಗತವೂ ಆದ ನಿಲುವು; ಅದಿಲ್ಲದಿದ್ದರೆ ಬಹುಸಂಖ್ಯಾತರ ಧರ್ಮ ಆಚರಣೆಗಳು ಉಳಿದವರ ನಂಬಿಕೆ ಆಚರಣೆಗಳನ್ನು ಹಿಚುಕಿ ಹಾಕಬಹುದು ಎಂಬ ಭೀತಿಯೂ ಭ್ರಮೆಯೇನಸಲ್ಲ. ಇದನ್ನು ದೃಢವಾಗಿ ನಂಬಿದ ಬಿಪನ್ ಚಂದ್ರ ಕೋಮುವಾದದ ವಿಚಾರವಾಗಿ ಖಚಿತ ನಿಲುವನ್ನು ತಾಳಿದ್ದರು. ಇದರಿಂದಾಗಿ ಅವರು ಕಾಂಗ್ರೆಸಿನ ಧೋರಣೆಗಳ ಸೀಮಿತತೆಯನ್ನು ಗುರುತಿಸಿಯೂ ಅವುಗಳನ್ನು ಒಪ್ಪಿದ್ದರು. ಇದು ಸ್ವಾತಂತ್ರ್ಯೋತ್ತರ ಭಾರತವನ್ನು ಅವರು ವಿಶ್ಲೇಷಿಸುವಾಗಲೂ ಅವರ ಮೇಲೆ ಪ್ರಭಾವವನ್ನು ಬೀರಿತು. ಮೃದುಲಾ ಮುಖರ್ಜಿ ಮತ್ತು ಆದಿತ್ಯ ಮುಖರ್ಜಿಯವರ ಸಹಯೋಗದಲ್ಲಿ ಬಿಪನ್ ಚಂದ್ರ ಬರೆದ ಇಂಡಿಯಾ ಆಫ್ಟರ್ ಇಂಡಿಪೆಂಡೆನ್ಸ್ (1999) ಎಂಬ ಪುಸ್ತಕದಲ್ಲಿ ಈ ನಿಲುವು ಸ್ಪಷ್ಟವಾಗಿ ಗೋಚರವಾಗುತ್ತದೆ. ಇದಲ್ಲದೆ ಅವರ ಸಂಗ್ರಹಿತ ಪ್ರಬಂಧಗಳು ಎಸ್ಸೇಸ್ ಆನ್ ಕಾಂಟೆಂಪೊರರಿ ಇಂಡಿಯಾ (1993)ದಲ್ಲೂ ಪ್ರಕಟವಾಗಿವೆ. ಆಧುನಿಕ ಭಾರತದ ಆಶಯ ಮತ್ತು ರಾಜಕೀಯದ ಮೇಲೆ ರಾಷ್ಟ್ರೀಯ ಚಳುವಳಿಯ ಪ್ರಭಾವವು ಹೇಗೆ ಮೂಡಿಬಂತು, ಅದು ನಮ್ಮ ಸಂವಿಧಾನದ ರಚನೆ ಮತ್ತು ಸ್ವರೂಪಗಳಲ್ಲಿ, ನೆಹರೂರವರ ಆರ್ಥಿಕ, ಆಂತರಿಕ ಮತ್ತು ವಿದೇಶ ನೀತಿಗಳಲ್ಲಿ ಹಾಗೂ ಅವರ ನಾಯಕತ್ವದ ವೈಖರಿಯಲ್ಲಿ ಹೇಗೆ ಪ್ರಕಟಗೊಂಡಿತು ಎಂದು ಈ ಪುಸ್ತಕ ವಿವರಿಸುತ್ತದೆ. ಕಾಂಗ್ರೆಸ್ ಆಳ್ವಿಕೆಯಲ್ಲಿ ಭೂ ಮಸೂದೆಗಳ ಅನುಷ್ಠಾನದ ಬಗ್ಗೆ ಒಳ್ಳೆಯ ಮಾತನ್ನು ಹೇಳುತ್ತದೆ.

ಸ್ವಾತಂತ್ರ್ಯೋತ್ತರ ಭಾರತದ ಬೆಳವಣಿಗೆಗಳನ್ನು ವಿಶ್ಲೇಷಿಸುವಾಗ ರಾಜಕೀಯ ನಿಲುವುಗಳನ್ನು ತಾಳದೆ ಇರುವುದು ಕಷ್ಟಕರ; ಅಂತಹ ಆಪಾದನೆಯನ್ನು ಕೇಳದೆ ಇರುವುದು ಇನ್ನೂ ದುಸ್ತರ. ಬಿಪನ್ ಚಂದ್ರ ಕಾಂಗ್ರೆಸ್ ಪಕ್ಷದತ್ತ ವಾಲಿದರು. ಅದರ ಹಿರಿಮೆಯನ್ನು ಸಾರಿದರು. ಅವರ ಸ್ತುತಿಪಾಠಕರಾದರು ಎಂಬ ದೂರು ಸಾಕಷ್ಟು ಕೇಳಿ ಬಂತು. ಸ್ವಾತಂತ್ರ್ಯ ಚಳುವಳಿಯ ಮುಂಚೂಣಿಯಲ್ಲಿದ್ದ ಕಾಂಗ್ರೆಸ್ ಒಂದು ಹೆಸರಿಗೆ ಅಂಟಿಕೊಂಡಿದ್ದರೂ ಅದರ ಸಿದ್ಧಾಂತ ವರಸೆಗಳು ಬದಲಾಗುತ್ತಿದ್ದುದು ಸತ್ಯ. ಸ್ವತಂತ್ರ ಭಾರತದಲ್ಲಿ ಕಾಂಗ್ರೆಸ್ ಆಡಳಿತವೂ ಹಾಗೆಯೇ. ನೆಹರೂರವರು ಪ್ರಜಾಪ್ರಭುತ್ವವನ್ನು ಉಳಿಸಿ ಬೆಳೆಸಿದ ರೀತಿಯು ಮುಂದೆ ಅವರ ಉತ್ತರಾಧಿಕಾರಿಯಲ್ಲಿ ಊನಕಂಡಿದ್ದು ದಿಟ. ತುರ್ತುಪರಿಸ್ಥಿತಿಯ ಘೋಷಣೆ ಮತ್ತು ಅದರ ಆಚರಣೆ ನಮ್ಮ ಪ್ರಜಾತಂತ್ರಕ್ಕೆ ಎರಗಿದ ಒಂದು ದೊಡ್ಡ ಕುತ್ತು ಎಂಬುದು ನಿರ್ವಿವಾದ. ಬಿಪನ್ ಚಂದ್ರ ಅದನ್ನು ಸ್ಪಷ್ಟರೂಪದಲ್ಲಿ ಖಂಡಿಸದೆ ಇದ್ದದ್ದು ಕೆಲವರಿಗೆ ಆಶ್ಚರ್ಯ ತಂದಿತು. ಸಮಕಾಲೀನ ಇತಿಹಾಸದಲ್ಲಿ ಸತ್ಯಾನ್ವೇಷಣೆಗಿಂತ ಸತ್ಯದ ಒಕ್ಕಣೆ ಹೆಚ್ಚು ಕಷ್ಟ ಎಂದರೆ ತಪ್ಪಲ್ಲ.

* * *

ಬಿಪನ್ ಚಂದ್ರ ಅವರು ಜವಹರ್‌ಲಾಲ್ ನೆಹರೂ ವಿಶ್ವ ವಿದ್ಯಾಲಯದಲ್ಲಿದ್ದಾಗ ಅನೇಕ ಸಂಶೋಧನಾ ವಿದ್ಯಾರ್ಥಿಗಳನ್ನು ತಯಾರು ಮಾಡಿದರು. ಅವರಲ್ಲಿ ಕೆಲವರು ಅವರ ಸಹೋದ್ಯೋಗಿಗಳಾಗಿ ಬೆಳೆದರೆ, ಇನ್ನು ಅನೇಕರು ವಿವಿಧ ಸಂಸ್ಥೆಗಳ ಹಾಗೂ ವಿಶ್ವವಿದ್ಯಾಲಯಗಳ ಘನತೆಯನ್ನು ಹೆಚ್ಚಿಸಿದರು. ಅವರಲ್ಲಿ ಅನೇಕರ ಸಂಶೋಧನಾ ಕೃತಿಗಳು ಸೇಜ್ ಸಿರೀಸ್ ಇನ್ ಮಾಡರ್ನ್ ಇಂಡಿಯನ್ ಹಿಸ್ಟರಿ ಎಂಬ ಶೀರ್ಷಿಕೆಯ ಅಡಿಯಲ್ಲಿ ಹೊರಬಂತು. ಅವುಗಳಲ್ಲಿ ಸುಚೇತಾ ಮಹಾಜನ್, ಆದಿತ್ಯ ಮುಖರ್ಜಿ, ಮೃದುಲಾ ಮುಖರ್ಜಿ, ಸಲೀಲ್ ಮಿಶ್ರಾ, ವಿಶಾಲಾಕ್ಷಿ ಮೆನನ್, ರಾಕೇಶ್ ಬತಬ್ಯಾಲ್, ತಾನ್ ತೈ ಯೊಂಗ್, ಗ್ಯಾನೇಶ್ ಖುದೈಸಿಯ, ಚಂಡಿಪ್ರಸಾದ್ ನಂದ, ರಾಜಶೇಖರ ಬಸು, ಮುಂತಾದವರ ಕೃತಿಗಳು ಮುಖ್ಯವಾದುವುಗಳು.

2004ರಿಂದ 2012ರತನಕ ಬಿಪನ್ ಚಂದ್ರ ಅವರು ನ್ಯಾಷನಲ್ ಬುಕ್ ಟ್ರಸ್ಟ್‌ನ ಮುಖ್ಯಸ್ಥರಾಗಿ ಕಾರ್ಯವಹಿಸಿದರು. ಮೌಲಿಕ ಪುಸ್ತಕಗಳನ್ನು ಕಡಿಮೆ ಬೆಲೆಯಲ್ಲಿ ಓದುಗರಿಗೆ ಮುಟ್ಟಿಸುವ ಟ್ರಸ್ಟಿನ ಕೆಲಸವನ್ನು ಅವರು ಮುಂದುವರಿಸಿದರು. "ಸೋಶಿಯಲ್ ಸೈನ್ಸ್ ಸಿರೀಸ್" ಎಂಬ ಹೊಸ ಶೀರ್ಷಿಕೆಯ ಅಡಿಯಲ್ಲಿ ಅನೇಕ ಹೊಸ ಹಾಗೂ ಮುದ್ರಣದಲ್ಲಿ ಲಭ್ಯವಿಲ್ಲದ ಪುಸ್ತಕಗಳನ್ನು ಮುದ್ರಿಸಿದರು. ಹಲವು ಹೊಸ ಬರಹಗಾರರನ್ನು ಪ್ರೋತ್ಸಾಹಿಸಿದರು.

ಅವರ ಜೀವನದ ಕೊನೆಯ ಕೆಲವು ವರ್ಷಗಳು ಅವರನ್ನು ಹೆಚ್ಚು ದಣಿಸಿತು. ಅವರ ದೃಷ್ಟಿಯು ಕ್ಷೀಣವಾಗಿ ಅವರಿಗೆ ಓದುವುದು ಪ್ರಯಾಸಕರವಾಗತೊಡಗಿತು. ಆಗ ಅವರು ಅಕ್ಷರಗಳ ಗಾತ್ರವನ್ನು ವಿಶೇಷವಾಗಿ ಹಿಗ್ಗಿಸಿ ಓದುವ ಸಾಹಸವನ್ನು ಮಾಡಿದರು; ಅವರ ಪತ್ನಿ, ಉಷಾ ಅವರ ಸಹಾಯವನ್ನು ಪಡೆದು ಓದುವ ಪ್ರಯತ್ನವನ್ನು ಮುಂದುವರಿಸಿದರು. ಆದರೆ 2009ರಲ್ಲಿ ಪತ್ನಿ ಉಷಾ ಅವರನ್ನು ಅಗಲಿದಾಗ ಅವರು ಮಾನಸಿಕವಾಗಿಯೂ ಬಹಳಷ್ಟು ಜರ್ಝರಿತರಾದರು. ನ್ಯಾಷನಲ್ ಬುಕ್ ಟ್ರಸ್ಟಿನಿಂದ ನಿರ್ಗಮಿಸಿದ ನಂತರ ಬಿಪನ್ ಚಂದ್ರ ಸಾರ್ವಜನಿಕ ಹಾಗೂ ಪಾಂಡಿತ್ಯಮುಖೀ

ಜೀವನದಿಂದ ಬಹುತೇಕ ವಿರಮಿಸಿದರು. 2014 ಅಗಸ್ಟ್ 30ರಂದು ಅವರು ನಿದ್ರೆಯಿಂದ ಚಿರನಿದ್ರೆಗೆ ಜಾರಿದರು.

* * *

ಬಿಪನ್ ಚಂದ್ರ ಅವರನ್ನು ಮಾರ್ಕ್ಸಿಸ್ಟ್ ಇತಿಹಾಸಕಾರರ ಪಂಕ್ತಿಯಲ್ಲಿ ಸೇರಿಸುವುದು ವಾಡಿಕೆ. ಜವಹರ್‌ಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ಎಡಪಂಥೀಯರ ದೊಡ್ಡ ಹಿಂಡನ್ನೇ ಸಾಕಲಾಗಿದೆ ಎಂದು ಮಾಹಿತಿಯ ಬಗ್ಗೆಯಾಗಲೀ ಎಡಪಂಥದ ಕುರಿತಾಗಲೀ ಸರಿಯಾಗಿ ತಿಳಿಯದೆ ದೂಷಿಸುವ ಮಂದಿಗಂತೂ ಇವರು ಅಪ್ಪಟ ಮಾರ್ಕ್ಸಿಸ್ಟರಂತೆ ಕಂಡರು. ಆದರೆ ಎಡಪಂಥದೊಳಗೆ ಅನೇಕ ತಿರುವುಗಳಿವೆ, ಅದರಲ್ಲಿ ಅನೇಕ ಅತೃಪ್ತಿ ಅನಂಗೀಕಾರಗಳಿವೆ, ಅವುಗಳು ಅನೇಕ ಅಸಂಪ್ರದಾಯಗಳನ್ನು ಸೃಷ್ಟಿಸಿವೆ ಎಂಬುದನ್ನು ಗಮನಿಸುವುದು ಅವಶ್ಯ. ಬಿಪನ್ ಚಂದ್ರ ಮಾರ್ಕ್ಸಿಸ್ಟ್ ಸಿದ್ಧಾಂತವನ್ನು ಒಪ್ಪಿಕೊಂಡೇ ಅದರ ಕೆಲವು ಅಂಶಗಳನ್ನು ಪ್ರಶ್ನಿಸಿದರು. ಭಾರತದ ಸ್ವಾತಂತ್ರ್ಯ ಚಳುವಳಿಯ ಬೂರ್ಜ್ವಾ ಲಕ್ಷಣಗಳನ್ನು ಗುರುತಿಸಿಯೇ ಅದು ಒಂದು ವಿಶೇಷ ಕ್ರಾಂತಿಯನ್ನು ಸೃಷ್ಟಿಸಿತು ಎಂದು ವಾದಿಸಿದರು. ವಸಾಹತುಶಾಹಿಯ ವಿರುದ್ಧದ ಹೋರಾಟದಲ್ಲಿ ಕಾಂಗ್ರೆಸ್ ದೇಶದ ಎಲ್ಲಾ ವರ್ಗಗಳನ್ನು ಪ್ರತಿನಿಧಿಸಿತು. ದಾದಾಭಾಯಿ ನವರೋಜಿ, ರಾನಡೆ ಅವರಿಂದ ಮೊದಲಾಗಿ ಗಾಂಧೀಜಿ, ನೆಹರೂರಂಥ ಧುರೀಣರು ತಮ್ಮ ವರ್ಗದ ಚೌಕಟ್ಟನ್ನು ಮೀರಿ ದೇಶದ ಹಾಗೂ ವಸಾಹತುಶಾಹಿಯೊಳಗೆ ಏರ್ಪಟ್ಟ ಮೂಲ ವೈರುಧ್ಯವನ್ನು ಗುರುತಿಸಿ ಅದರ ವಿರುದ್ಧ ಹೋರಾಡಿದರು. ದೇಶದೊಳಗೆ ಬೆಳೆದು ಬಂದ ಅನೇಕ ಅಸ್ವಾತಂತ್ರ್ಯಗಳ ಅಥವಾ ಬೇಡಿಗಳ ಬಗ್ಗೆಯೂ ಅವರಿಗೆ ಅರಿವಿತ್ತು. ಆದರೆ ಅವುಗಳನ್ನು ಆನುಷಂಗಿಕ ವೈರುಧ್ಯವೆಂದುಕೊಂಡು ಕಾಂಗ್ರೆಸ್ ಸಾಮ್ರಾಜ್ಯಶಾಹಿ ಶಕ್ತಿಯ ವಿರುದ್ಧದ ಹೋರಾಟಕ್ಕೆ ಆದ್ಯತೆ ನೀಡಿತು, ಎಂಬುದು ಬಿಪನ್ ಚಂದ್ರ ಅವರ ಅಭಿಪ್ರಾಯ. ಇದು ಮಾರ್ಕ್ಸಿಸ್ಟರು ಬೂರ್ಜ್ವಾ ಪಕ್ಷ ಎಂದು ಬಣ್ಣಿಸುತ್ತಿದ್ದ ಕಾಂಗ್ರೆಸ್ಸನ್ನು ಓಲೈಸಿದಂತೆ ಅನೇಕರಿಗೆ ಕಂಡಿತು. ಅಷ್ಟಲ್ಲದೆ ಅವರು 1983ರಲ್ಲಿ ಸಂಪಾದಿಸಿದ ಇಂಡಿಯನ್ ಲೆಫ್ಟ್: ಕ್ರಿಟಿಕಲ್ ಎಪ್ರೈಸಲ್ಸ್ ಎಂಬ ಪುಸ್ತಕದಲ್ಲಿ ಎಡಪಂಥದ ಆಚಾರ ವಿಚಾರಗಳನ್ನು ಸಾಕಷ್ಟು ಟೀಕಿಸಿದರು. ಇದರಿಂದ ಅನೇಕ ಸಾಂಪ್ರದಾಯಿಕ ಮಾರ್ಕ್ಸಿಸ್ಟರು ಮುನಿಸಿಕೊಂಡಿದ್ದರು. ಇವರು ಕಾಂಗ್ರೆಸ್ ಪಕ್ಷದತ್ತ ವಾಲುತ್ತಿದ್ದಾರೆ ಎಂದು ಸಾಂಪ್ರದಾಯಿಕ ಮಾರ್ಕ್ಸಿಸ್ಟರು ಗೊಣಗಿದರೆ ಅವರ ಇನ್ನೂ ತ್ಯಜಿಸದ ಮಾರ್ಕ್ಸಿಸ್ಟ್ ನಿಷ್ಠೆ ರಾಷ್ಟ್ರೀಯ ಇತಿಹಾಸಕಾರರೆಂಬವರನ್ನು ತೀರ ಹತ್ತಿರವಾಗಲು ಬಿಡಲಿಲ್ಲ. ಕೋಮುವಾದದ ವಿರುದ್ಧ ಇವರ ತೀವ್ರ ಹೋರಾಟ ಬಲಪಂಥೀಯರ ಸ್ನೇಹವನ್ನು ಖಂಡಿತವಾಗಿಯೂ ಗಳಿಸುವಂತಿರಲಿಲ್ಲ. ಇವರ ಮಾರ್ಕ್ಸಿಸ್ಟ್-ರಾಷ್ಟ್ರೀಯತೆಯ ಇತಿಹಾಸ ಬರೆವಣಿಗೆಗಳು ಕೇಂಬ್ರಿಜ್ ಬಣದೊಡನೆಯಾಗಲೀ ಸಬಾಲ್ಟರ್ನ್ ಗುಂಪಿನವರೊಡನೆಯಾಗಲೀ ಸಹಾನುಭೂತಿಯನ್ನು ತೋರುವಂತಿರಲಿಲ್ಲ. ಕೇವಲ ಜನಪ್ರಿಯತೆಯನ್ನು ಕರತಾಡನವನ್ನು ಅರಸದೆ ಬಿಪನ್ ಚಂದ್ರ ಅವರು ತಮ್ಮ ಸಂಶೋಧನೆಗಳನ್ನು, ಸೈದ್ಧಾಂತಿಕ ಹಾಗೂ ರಾಜಕೀಯ ನಿಲುವುಗಳನ್ನು ನಿರ್ಭೀತಿಯಿಂದ ಪ್ರಕಟಿಸಿದರು. ತಮ್ಮ ಬಗ್ಗೆ ಟೀಕೆಗಳೇನೇ ಇರಲಿ, ಇತಿಹಾಸ ರಚನೆಯಲ್ಲಿ ತನ್ನದೇ ದಾರಿಯಲ್ಲಿ ನಡೆದರು. ಆ ಹಾದಿಯಲ್ಲಿ ತನ್ನ ಹೆಜ್ಜೆಯ ಗುರುತನ್ನು ಬಿಟ್ಟುಹೋದರು. ■

# ವಿಶೇಷ ಸಂಚಿಕೆಗಳ ಮಾರಾಟ

'ಇತಿಹಾಸ ದರ್ಪಣ'ವು ಈವರೆಗೆ ಮೂರು ಸಂಗ್ರಹ ಯೋಗ್ಯವಾದ ವಿಶೇಷ ಸಂಚಿಕೆಗಳನ್ನು ಹೊರತಂದಿದೆ. ಆಯಾ ಕ್ಷೇತ್ರದ ತಜ್ಞರಿಂದಲೇ ಬರೆಸಿ ಹೊರತಂದ ಈ ಕೃತಿಗಳು ನಮ್ಮಲ್ಲಿ ಲಭ್ಯವಿವೆ.

*೧. ಕೃಷ್ಣ(ದೇವ)ರಾಯ ಮತ್ತು ವಿಜಯನಗರ ಸಾಮ್ರಾಜ್ಯ*

ಒಟ್ಟು ಪುಟಗಳು: ೧೨೦, ಬೆಲೆ: ರೂ. ೬೦/-

ಈ ಕೃತಿಯು ನಾಡಿನ ಮತ್ತು ಹೊರನಾಡಿನ ಹಿರಿಯ ಹಾಗೂ ಯುವ ಸಂಶೋಧಕರುಗಳಾದ ಎಂ.ವಿ.ಶ್ರೀನಿವಾಸ್, ಎಸ್.ಕೆ.ಅರುಣಿ, ಫಾದರ್ ಹೆರಾಸ್, ಶ್ರೀನಿವಾಸ ಶಿಸ್ತಲ, ಕೆ.ಜಿ.ಗೋಪಾಲಕೃಷ್ಣರಾವ್, ಸಿ.ಬಿ.ಪಾಟೀಲ, ಪಿ.ವಿ.ಕೃಷ್ಣಮೂರ್ತಿ, ಎನ್.ವೆಂಕಟರಮಣಯ್ಯ, ಎಚ್.ಎಸ್.ಗೋಪಾಲ್ ರಾವ್, ಮನು ವಿ. ದೇವದೇವನ್, ಹರಿಹರ ಶ್ರೀನಿವಾಸರಾವ್, ಕೆ.ವಸಂತಲಕ್ಷ್ಮಿ, ಕೂ.ಸ.ಅಪರ್ಣ, ಗಿರಿಜಾಪತಿ, ಆರ್.ಶೇಷಶಾಸ್ತ್ರಿ, ಅ.ಲ.ನರಸಿಂಹನ್ ಹಾಗೂ ಸುಂಕಂ ಗೋವರ್ಧನ ಅವರುಗಳ ವಿದ್ವತ್ಪೂರ್ಣ ಲೇಖನಗಳನ್ನು ಒಳಗೊಂಡಿದೆ.

*೨. ನಮ್ಮ ಬೆಂಗಳೂರು.*

ಒಟ್ಟು ಪುಟಗಳು: ೧೧೨, ಬೆಲೆ: ರೂ. ೧೦೦/-

ಈ ಕೃತಿಯು ಎಚ್.ಎಸ್.ದೊರೆಸ್ವಾಮಿ, ಸುಂಕಂ.ಗೋವರ್ಧನ, ಪಿ.ವಿ.ಕೃಷ್ಣಮೂರ್ತಿ, ಎಸ್.ಕೆ.ಅರುಣಿ, ಎಂ.ಜಮುನ, ಸುರೇಶ್ ಮೂನ, ಎಸ್.ಎಲ್.ಶ್ರೀನಿವಾಸಮೂರ್ತಿ, ವೇಮಗಲ್ ಸೋಮಶೇಖರ್, ರಶ್ಮಿ.ಎಸ್, ಆರ್.ಡಿ.ಪವಮಾನ, ಅ.ಲ.ನರಸಿಂಹನ್, ಹಂ.ಗು.ರಾಜೇಶ್, ಎಂ.ಎಸ್.ಉಮೇಶ್ ಅವರ ಅಮೂಲ್ಯ ಲೇಖನಗಳ ಜೊತೆಗೆ ಬೆಂಗಳೂರು ಕುರಿತು ಈವರೆಗೂ ಪ್ರಕಟವಾಗಿರುವ ಕೃತಿಗಳ ವಿವರ ಮತ್ತು ಐತಿಹಾಸಿಕ ಚಿತ್ರಗಳ ಸಂಗ್ರಹವನ್ನು ಒಳಗೊಂಡಿದೆ. ಈ ಕೃತಿಯನ್ನು ಎಸ್.ಕೆ.ಅರುಣಿ ಅವರು ಸಂಪಾದಿಸಿದ್ದಾರೆ.

*೩. ಕರ್ನಾಟಕವಲ್ಲಿ ಪುರಾತತ್ವ ಅಧ್ಯಯನಗಳು.*

ಒಟ್ಟು ಪುಟಗಳು: ೧೭೬, ಬೆಲೆ: ರೂ. ೧೧೦/-

ಇದು ಕರ್ನಾಟಕದ ಪುರಾತತ್ವ ಅಧ್ಯಯನಗಳನ್ನು ಕುರಿತು ಸಂಕ್ಷಿಪ್ತ ಚಿತ್ರಣವನ್ನು ಕಟ್ಟಿಕೊಡುವ ಅಪರೂಪದ ಕೃತಿಯಾಗಿದೆ. ಈ ಕೃತಿಗೆ ನಾಡಿನ ಹಿರಿಯ ಮತ್ತು ಯುವ ಪುರಾತತ್ವ ತಜ್ಞರುಗಳಾದ- ಎಂ.ಎಸ್.ಕೃಷ್ಣಮೂರ್ತಿ, ಎಸ್.ನಾಗರಾಜು, ಪಿ.ಶೋಭಾ, ಕೆ.ಪಿ.ಶಿವತಾರಕ್, ಎಚ್.ಎಂ.ಅನಿತಾ, ಲ.ನ.ಸ್ವಾಮಿ, ಸಿ.ಎಸ್.ವಾಸುದೇವನ್, ಜಗದೀಶ್ ಅವರುಗಳು ಕೊಡುಗೆ ನೀಡಿದ್ದಾರೆ. ಅಪೂರ್ವ ಛಾಯಾಚಿತ್ರಗಳನ್ನು ಒಂದೆಡೆ ಪ್ರತ್ಯೇಕವಾಗಿಯೇ ನೀಡಲಾಗಿದೆ. ಈ ಕೃತಿಯನ್ನು ಎಸ್.ಕೆ.ಅರುಣಿ ಮತ್ತು ಹಂ.ಗು.ರಾಜೇಶ್ ಸಂಪಾದಿಸಿದ್ದಾರೆ.

ಈ ಮೇಲಿನ ಬಿಡಿ ಕೃತಿಗಳು ಬೇಕಾದಲ್ಲಿ ಈ ಕೆಳಕಂಡ ವಿಳಾಸಕ್ಕೆ ಕೃತಿಯ ಮೊತ್ತದ ಜೊತೆಗೆ ರೂ.೨೦/- ಅಂಚೆವೆಚ್ಚ ಸೇರಿಸಿ, ಎಂ.ಓ /ಡಿ.ಡಿ ಯನ್ನು ತಮ್ಮ ವಿಳಾಸದ ಜೊತೆಗೆ ಕಳುಹಿಸಿಕೊಡಿ.

ವಿಶೇಷ ಕೊಡುಗೆ: ರೂ.೨೫೦/- ಗಳಿಗೆ ಮೂರೂ ಕೃತಿಗಳನ್ನು ಕಳುಹಿಸಿಕೊಡಲಾಗುವುದು.

ವಿಳಾಸ: ಸಂಪಾದಕರು, 'ಇತಿಹಾಸ ದರ್ಪಣ', #೩೩ ಎ, ಐ.ಟಿ.ಐ ಕಾಲೇಜು ಹತ್ತಿರ, ಕೆಂಪೇಗೌಡನಗರ, ವಿಶ್ವನೀಡಂ – ಅಂಚೆ, ಬೆಂಗಳೂರು-೫೬೦೦೯೧. ಮೊ- ೭೮೨೯೪೦೪೦೬೩

# ಪುರಿ ಜಗನ್ನಾಥ ದೇವಾಲಯದ ಇತಿಹಾಸ

▫ ಮನು ವಿ. ದೇವದೇವನ್
ಸಹಾಯಕ ಪ್ರಾಧ್ಯಾಪಕರು,
ಮಾನವಿಕ ಮತ್ತು
ಸಮಾಜ ವಿಜ್ಞಾನ ವಿಭಾಗ,
ಐ.ಐ.ಟಿ. ಮಂಡಿ-175001
ಹಿಮಾಚಲ ಪ್ರದೇಶ.
discoverie@gmail.com

(ಭಾಗ-5)

*(ಕಳೆದ ಸಂಚಿಕೆಯಿಂದ)*

**ಭೋ**ಯಿ ರಾಜಮನೆತನದ ನಿಯಂತ್ರಣಕ್ಕೆ ಬಂದ ಬಳಿಕ ಪುರಿ ದೇವಾಲಯದ ಇತಿಹಾಸದಲ್ಲಿ ಸಂಘರ್ಷದ ಹೊಸ ಹಂತವೊಂದು ಆರಂಭಗೊಂಡಿತು. ಭೋಯಿ ಗಜಪತಿ, ದೇವಾಲಯದ ಅರ್ಚಕವರ್ಗ ಹಾಗೂ ಕಟಕ್‌ನ ಮುಘಲ್ ಸುಬಹ್‌ದಾರ್‌ರ ನಡುವಿನ ಪೈಪೋಟಿಯ ವಿವಿಧ ನೆಲೆಗಳು ಈ ಸಂಘರ್ಷಗಳು ಅನವೃತಗೊಳ್ಳಲು ಕಾರಣವಾದವು. ಪ್ರತಿಯೊಬ್ಬರಿಗೂ ತಮ್ಮದೇ ಆದ ಕುತಂತ್ರಗಳಿದ್ದವು, ಆ ಮೂಲಕ ಸಾಧಿಸಿಕೊಳ್ಳುವ ಗೂಢ ಆರ್ಥಿಕ, ರಾಜಕೀಯ ಲಕ್ಷ್ಯಗಳಿದ್ದವು. ಇದರಿಂದಾಗಿ ಜಗಪತಿ ಎಂಬ ಸ್ಥಾನವು ಅನೇಕ ಏರಿಳಿತಗಳನ್ನು ಕಂಡು ಅರ್ಚಕವರ್ಗವು ದೇವಾಲಯದ ನಿರ್ವಹಣೆಯಲ್ಲಿ ಇನ್ನಷ್ಟು ಪ್ರಬಲ ಹಸ್ತಕ್ಷೇಪಗಳನ್ನು ನಡೆಸಬಲ್ಲ ಶಕ್ತಿಯಾಗಿ ಬೆಳೆದು ನಿಂತಿತು.

1605ರಲ್ಲಿ ಅಕ್‌ಬರ್ ನಿಧನ ಹೊಂದಿದ. ಇದಾದ ಎರಡು ವರ್ಷಗಳ ಬಳಿಕ ಒಡಿಶ್ಶಾ ಪ್ರಾಂತ್ಯವನ್ನು ಪ್ರತ್ಯೇಕ ಸುಬಾಹ್ ಎಂದು ಗುರುತಿಸಲಾಯಿತು. ಅಕ್‌ಬರ್‌ನ ಬಳಿಕ ಪಟ್ಟವೇರಿದ ಜಹಾಂಗೀರ್ ಗೋಲ್ಕೊಂಡಾ ಸುಲ್ತಾನರ ವಶದಲ್ಲಿದ್ದ ರಾಜಮಂಡ್ರಿಯನ್ನು ಮುಘಲ್‌ಬಂದಿಗೆ ಸೇರಿಸಿಕೊಳ್ಳುವ ನಿರ್ಧಾರ ಕೈಗೊಂಡುದರಿಂದ ಖುರ್ಧಾದ ಗಜಪತಿಗೆ ಮುಘಲ್ ರಾಜಕಾರಣದಲ್ಲಿ ಒಡಿಶ್ಶಾದಲ್ಲಿ ಆ ತನಕವಿದ್ದ ವಿಶೇಷ ಸ್ಥಾನಮಾನಗಳಿಗೆ ಕಡಿವಾಣ ಬೀಳುವ ಪರಿಸ್ಥಿತಿ ಉಲ್ಬಣಗೊಂಡಿತು. ಗಜಪತಿಯ ಅಧಿಕಾರವು ಹಾಗೂ ಅವನಿಗೆ ಸ್ಥಳೀಯ ರಾಜಕಾರಣದಲ್ಲಿದ್ದ ಮಹತ್ವಕ್ಕೆ ಪುರಿ ದೇವಾಲಯದ ಮೇಲೆ ಅವನಿಗಿದ್ದ ಹಿಡಿತವೇ ಕಾರಣವಾದುದರಿಂದ ಅವನನ್ನು ಹತ್ತಿಕ್ಕಲು ಪುರಿಯ ದೇವಾಲಯವನ್ನು ಲಕ್ಷ್ಯದಲ್ಲಿಟ್ಟುಕೊಂಡು ಕಾರ್ಯಾಚರಣೆ



ಅಕ್‌ಬರ್



ಅಲೀವರ್ಧೀ ಖಾನ್

ನಡೆಸುವುದು ಅನಿವಾರ್ಯವಾಗಿದ್ದಿರಬಹುದು ಎಂದು ಕುಲ್ಕೆ ಅವರ ವಿಶ್ಲೇಷಣೆಯ ಬಲದಲ್ಲಿ ಊಹಿಸಬಹುದಾಗಿದೆ.[1] ಒಡಿಶ್ಶಾದ ಮೊದಲ ಸುಬಹ್‌ದಾರ್ ಆಗಿ 1607ರಲ್ಲಿ ಹಾಶಿಮ್ ಖಾನ್ ನೇಮಕಗೊಂಡ ಬಳಿಕ ಕೆಲವು ಹೊಸ ತರಹದ ಘಟನೆಗಳು ಘಟಿಸತೊಡಗಿದವು. ರಾಜ್‌ಪುತ್ ಕೇಶೂದಾಸ್ ಮಾರೂ ಎಂಬಾತನು ರಥಯಾತ್ರೆಯ ಸಂದರ್ಭದಲ್ಲಿ ಪುರಿಯನ್ನು ಆಕ್ರಮಿಸಿ ರಥಗಳನ್ನು ಸುಟ್ಟುಹಾಕಿ ದೇವಾಲಯದ ಸಂಪತ್ತನ್ನು ದೋಚಿದನು. ಕುಪಿತನಾದ ಗಜಪತಿ ಪುರುಷೋತ್ತಮನು ಮಾರೂನ ಮೇಲೆ ಸೈನಿಕ ಕಾರ್ಯಾಚರಣೆ ನಡೆಸಲು ನಿರ್ಧರಿಸಿ ಪುರಿಗೆ ತೆರಳಿದಾಗ ಮಾರೂ ದೇವಾಲಯದಲ್ಲಿ ಅವಿತುಕೊಂಡನು. ಆಗ ಆತನ ನೆರವಿಗೆಂದು ಹಾಶಿಮ್ ಖಾನ್ ಕಟಕ್‌ದಿಂದ ತನ್ನ ಪಡೆಗಳನ್ನು ರವಾನೆಗೊಳಿಸಿದ ಕಾರಣ ಪುರುಷೋತ್ತಮನು ತನ್ನ ಹಲ್ಲೆ ನಿಲ್ಲಿಸಿ ಅಪಾರ ಹಣವನ್ನು ಕಪ್ಪವಾಗಿ ನೀಡಿ ಒಪ್ಪಂದವೊಂದಕ್ಕೆ ಸಹಿ ಹಾಕಲು ನಿರ್ಬಂಧಿತನಾದನು.[2] ಅಲ್ಲಿಂದಾಚೆಗೆ ಈ ತರಹದ ಘಟನೆಗಳು ಮತ್ತೆ ಮತ್ತೆ ನಡೆಯತೊಡಗಿದವು. ಕೆಲವೇ ವರ್ಷಗಳ ಬಳಿಕ, 1611ರಲ್ಲಿ, ಸುಬಹ್‌ದಾರ್ ಸ್ಥಾನಕ್ಕೆ ನೇಮಕಗೊಂಡ ರಾಜಾ ಕಲ್ಯಾಣ್ ಸಿಂಗ್ ಪುನಃ ಪುರಿ ದೇವಾಲಯವನ್ನು ಮುತ್ತಿಗೆ ಹಾಕಿದನು. ಈ ಸಲ ಅರ್ಚಕಬಳಗವು ದೇವತಾಮೂರ್ತಿಗಳನ್ನು ಶ್ರೀಮಂದಿರದಿಂದ ಕೊಂಡೊಯ್ದು ಚಿಲಿಕಾ ಸರೋವರದಲ್ಲಿರುವ ದ್ವೀಪವೊಂದರಲ್ಲಿ ಜೋಪಾನವಾಗಿಟ್ಟರು ಎಂದು ಮಾದಳಾಪಾಂಜಿ ತಿಳಿಸುತ್ತದೆ.[3] ದಾರುಮೂರ್ತಿಗಳು ಅಲ್ಲಿಯೇ ಹಲವು ವರ್ಷಗಳ ಕಾಲ ಉಳಿದವು. 1617ರಲ್ಲಿ ಸುಬಹ್‌ದಾರ್ ಪದವಿ ಸ್ವೀಕರಿಸಿದ ಮಕರ್ರಮ್ ಖಾನ್ ಖುರ್ಧಾದ ಮೇಲೆ ಹಲ್ಲೆ ನಡೆಸಿ ಆ ಪ್ರದೇಶವನ್ನು ಗಜಪತಿಯ ಕೈಯಿಂದ ವಶಪಡಿಸಿಕೊಂಡನು.[4] ಈ ಕುರಿತು ಜಹಾಂಗೀರ್ ತನ್ನ ತುಜುಕ್ ಎ ಜಹಾಂಗೀರಿನಲ್ಲಿ ಮಾಡಿರುವ ಪರಾಮರ್ಶೆಯು ಕುಲ್ಕೆ ಅವರ ಸಮೀಕ್ಷೆಯಲ್ಲಿ ಉಲ್ಲೇಖ ಪಡೆದಿದೆ. ಜಹಾಂಗೀರ್ ಹೇಳುವಂತೆ, 'ಒಡಿಶ್ಶಾ, ಗೋಲ್ಕೊಂಡಾ ಪ್ರಾಂತ್ಯಗಳ

ನಡುವೆ ಇಬ್ಬರು ಝಮೀನ್‌ದಾರ್‌ಗಳಿದ್ದರು, ಒಬ್ಬ ಖುರ್ಧಾದ ರಾಜ, ಎರಡನೆಯವ ರಾಜಮಹೇಂದ್ರಿಯ ರಾಜ. ಖುರ್ಧಾ ಪ್ರಾಂತ್ಯವು ರಾಜಸಭೆಯ ಸೇವಕರ ವಶಕ್ಕೆ ಬಂದಿದೆ. ಇದಾದ ನಂತರ ರಾಜಮಹೇಂದ್ರಿ ಪ್ರಾಂತ್ಯದ ಸಾಲು."[5] ಮಕರ್ರಮ್ ಖಾನ್‌ನ ಹಲ್ಲೆಯಿಂದಾಗಿ ಪುರುಷೋತ್ತಮನು ಪರ್ವತ ಪ್ರಾಂತ್ಯದ ಮಾನತಿರಿ ಕೋಟೆಯಲ್ಲಿ ತಲೆಮರೆಸಿಕೊಂಡನು. ಜಗದೊಡೆಯ ಮತ್ತು ಅವನ ಸಂಗಡಿಗರ ವಿಗ್ರಹಗಳನ್ನು ಬಾನಪುರದ ಬಳಿಯ ಗ್ರಾಮವೊಂದಕ್ಕೆ ಸಾಗಿಸಿ ಸುರಕ್ಷಿತವಾಗಿ ಇಡಲಾಯಿತು. ಈ ಬಿಕ್ಕಟ್ಟಿನ ಪರಿಸ್ಥಿತಿಯು 1623ರವರೆಗೆ ಮುಂದುವರೆಯಿತು. ಆ ವೇಳೆಗಾಗಲೇ ತನ್ನ ಮಗ ಶಾಹ್ ಜಹಾನ್‌ನೊಂದಿಗಿನ ಜಹಾಂಗೀರ್‌ನ ಸಂಬಂಧವು ಸಾಕಷ್ಟು ಬಿಗಡಾಯಿಸಿ ಹೋಗಿತ್ತು. ಇದರ ಲಾಭ ಪಡೆದ ಗಜಪತಿ ನರಸಿಂಹನು ಶಾಹ್ ಜಹಾನ್ ಆ ವರ್ಷ ಒಡಿಸ್ಸಾದ ಯಾತ್ರೆ ಕೈಗೊಂಡಾಗ ಅವನನ್ನು ಸಂದರ್ಶಿಸಿ ಕಾಣಿಕೆಗಳನ್ನು ನೀಡಿದನು. ಪರಿಣಾಮ, ಶಾಹ್ ಜಹಾನ್‌ನ ಸೈನಿಕರು ಹಾಗೂ ಓರ್ವ ರಾಜ್‌ಪುತ್ ಅಧಿಕಾರಿಯ ನೆರವಿನೊಂದಿಗೆ ನರಸಿಂಹನು ದಾರುಮೂರ್ತಿಗಳನ್ನು ಪುರಿಗೆ ತಂದು ರತ್ನಸಿಂಹಾಸನದ ಮೇಲೆ ಪ್ರತಿಷ್ಠಾಪಿಸುವಲ್ಲಿ ಯಶಸ್ವಿಯಾದನು.

ಶಾಹ್ ಜಹಾನ್‌ನ ಕಾಲದಲ್ಲಿ (ಆಳ್ವಿಕೆ 1627–1657) ಪುರಿಯಲ್ಲಿ ಶಾಂತಿ, ಸುವ್ಯವಸ್ಥೆ ನೆಲೆನಿಂತಿತ್ತು. ಆಗಾಗ ನಡೆಯುತ್ತಿದ್ದ ಹಲ್ಲೆಯಿಂದಾಗಿ ದೇವಾಲಯದ ಮೂಲಕ ರಾಜ್ಯದ ಖಜಾನೆಗೆ ಉಂಟಾಗುತ್ತಿದ್ದ ವರಮಾನ ಕುಂಠಿತಗೊಂಡುದ್ದೇ ಪುರಿಯ ದೇವತಾರಾಧನೆಯನ್ನು ಮತ್ತೆ ಸುಗಮಗೊಳಿಸಲು ಶಾಹ್ ಜಹಾನ್‌ಗೆ ಪ್ರೇರಣೆಯಾದುದ್ದೆಂದು ಕುಲ್ಕೆ ಅಭಿಪ್ರಾಯಪಟ್ಟಿದ್ದಾರೆ.[6] ರಥಯಾತ್ರೆಯ ಸಂದರ್ಭದಲ್ಲಿ ಸುರಕ್ಷಾ ಕಾರ್ಯ ಕೈಗೊಳ್ಳುವ ಉಸ್ತುವಾರಿಯನ್ನು ಮುಘಲ್ ಅಧಿಕಾರಿಗಳೇ ವಹಿಸಿಕೊಂಡಿರಬಹುದಾದ ಸಾಧ್ಯತೆಯಿದೆ. 1633ರಲ್ಲಿ ಪುರಿಗೆ ಭೇಟಿಯಿತ್ತ ಇಂಗ್ಲಿಷ್ ಯಾತ್ರಿ ಬ್ರೂಟನ್ ರಥದ ಮೇಲೆ ಓರ್ವ ಮುಘಲ್‌ರವನು ಕುಳಿತಿರುವುದನ್ನು ಕಂಡದ್ದಾಗಿ ಹೇಳಿಕೊಂಡಿದ್ದಾನೆ.[7]

ಶಾಂತಿಯುತ ವಾತಾವರಣದ ಪೂರ್ಣ ಲಾಭ ಪಡೆದುಕೊಳ್ಳಲು ಶ್ರಮಿಸಿದವನೆಂದರೆ ಗಜಪತಿ ನರಸಿಂಹನು. ದೇವಾಲಯದಲ್ಲಿ ಅವನು ಅನೇಕ ಸುಧಾರಣಾ ಕಾರ್ಯಗಳಿಗೆ ಚಾಲನೆ ನೀಡಿದನು. ಇದಕ್ಕೆ ವೈಷ್ಣವ ಸಂತ ರಸಿಕಾನಂದನ ನೆರವು, ಬೆಂಬಲ ಅವನಿಗೆ ದೊರೆತಿರಬಹುದೆಂದು ಕುಲ್ಕೆ ಹೇಳಿದ್ದಾರೆ.[8] ಬಿಮಳಾಮಾತೆಯ ಗುಡಿಯಲ್ಲಿ ನಡೆಯುತ್ತಿದ್ದ ಮೃಗಬಲಿಯ ಆಚರಣೆಯನ್ನು ನರಸಿಂಹ ಕೊನೆಗೊಳಿಸಿದನು. ಬದಲಿಗೆ, ಜಗನ್ನಾಥನಿಗೆ ಅರ್ಪಿಸುವ ಪ್ರಸಾದವನ್ನು ಮೊದಲು ಬಿಮಳಾಮಾತೆಗೆ ಸಲ್ಲಿಸಬೇಕು, ಆಕೆ ಸೇವಿಸಿದ ಬಳಿಕವಷ್ಟೇ ಪ್ರಸಾದವು ಮಹಾಪ್ರಸಾದವಾಗುವುದು ಎಂದು ಘೋಷಣೆ ಹೊರಡಿಸಿದನು.[9] ಇದಲ್ಲದೆ ಖುರ್ಧಾ ರಾಜರಿಗೆ ಪುರಿಯಲ್ಲಿ ಅರಮನೆ ಕಟ್ಟಿಸಿದ್ದು ಹಾಗೂ ತನ್ನ ರಾಜಗುರುವನ್ನು ದೇವಾಲಯದ ಮುಖ್ಯ ನಿರ್ವಾಹಕ ಹಾಗೂ ಬಡಪರೀಕ್ಷಾ (ಮುಖ್ಯ ಪರೀಕ್ಷಕ) ಸ್ಥಾನಕ್ಕೆ ನೇಮಿಸಿದ್ದು ದೇವಾಲಯದ ಆಡಳಿತ ವ್ಯವಸ್ಥೆಯಲ್ಲಿ ನರಸಿಂಹನು ನಡೆಸಿದ ಗಮನಾರ್ಹ ಸುಧಾರಣೆಗಳಲ್ಲಿ ಒಂದಾಗಿದೆ.[10]

ದೇವಾಲಯ ನಿರ್ವಹಣೆಯಲ್ಲಿನ ಈ ಹಸ್ತಕ್ಷೇಪಗಳು ಸಂಪ್ರದಾಯವಾದಿಗಳಾದ ಅರ್ಚಕವರ್ಗದವರಿಗೆ ಸಮ್ಮತವಾಗಿರಲಿಕ್ಕಿಲ್ಲ. ತಮ್ಮ ಸ್ವಾಧೀನದಲ್ಲಿರಬೇಕಾದ ಧಾರ್ಮಿಕ ನೆಲೆಗಟ್ಟನ್ನು ನರಸಿಂಹನು ತನ್ನ ಭದ್ರಹಸ್ತದಲ್ಲಿ ಬಿಗಿಪಡಿಸಲು ನಡೆಸುತ್ತಿರುವ ಪ್ರಯತ್ನಗಳೇ

ಈ ಸುಧಾರಣೆಗಳೆಂದು ಅವರಿಗೆ ಕಂಡುಬಂದಿರಬಹುದು. ಆದರೆ ಗಜಪತಿ ನರಸಿಂಹನು ಇದಕ್ಕಿಂತಲೂ ದೂರಗಾಮಿಯಾದ ಇತರ ಕೆಲವು ಪರಿವರ್ತನೆಗಳಿಗೆ ಚಾಲನೆ ನೀಡಿದ್ದು ಅರ್ಚಕವರ್ಗಗಳಿಗೆ ನುಂಗಲಾಗದ ತುತ್ತಾಗಿತ್ತೆಂದು ತೋರುತ್ತದೆ. ಅದರಲ್ಲಿ, ಬ್ರಾಹ್ಮಣರಿಗೆ ದತ್ತಿ ನೀಡಲಾದ ಶಾಸನಗ್ರಾಮಗಳ ಮೇಲೆ ತಂಕಿ ಎಂಬ ತೆರಿಗೆಯೊಂದನ್ನು ಹಾಕಿದ್ದು ಒಂದಾಗಿದೆ.[11] ಅದಕ್ಕಿಂತ ತಲಸ್ಪರ್ಶಿಯಾದ ನರಸಿಂಹನ ಕ್ರಮವೆಂದರೆ ಕೆಲವು ಅಬ್ರಾಹ್ಮಣರಿಗೆ ವಿಧಿವತ್ತಾಗಿ ಬ್ರಾಹ್ಮಣ ಪದವಿ ನೀಡಿ ಸಾಮಂತ, ಭಟ್ಟಮಿಶ್ರ, ವೈದಿಕ ಮುಂತಾದ ನಾಮಾಂಕಿತಗಳನ್ನು ಒಡಗಿಸಿಕೊಡುವುದು. ಹೊಸದಾಗಿ ಜಾತಿಪರಿವರ್ತನೆ ಹೊಂದಿ ಬ್ರಾಹ್ಮಣರಾದ ಈ ವರ್ಗದವರಿಗೆ ಖುರ್ಧಾ ರಾಜಮನೆತನದೊಂದಿಗೆ ನಿಕಟ ಸಂಬಂಧವಿತ್ತು. ಪರಿಣಾಮ, ಅವರು ಆ ಪ್ರಾಂತ್ಯದ ಶಿಷ್ಯಪರಂಪರೆಯ ಮುಂದಾಳುಗಳಾಗಿ ಹಾಗೂ ಪ್ರಮುಖ ವಕ್ತಾರರಾಗಿ ವಿಕಾಸ ಪಡೆದುಕೊಂಡರು. ಒಡಿಸ್ಸಾದ ಧಾರ್ಮಿಕ ಜೀವನದಲ್ಲಿ ಪುರಿಯ ಅರ್ಚಕವರ್ಗದವರಿಗಿದ್ದ ಅಗ್ರಗಣ್ಯ ಸ್ಥಾನವು ಇದರಿಂದಾಗಿ ಸ್ಪರ್ಧೆಯನ್ನು ಎದುರಿಸಬೇಕಾಯಿತು. ಕೊನೆಗೆ ನರಸಿಂಹನು ತನ್ನ ಎಲ್ಲೆ ಮೀರಿದ ಸುಧಾರಣೆಗಳಿಗೆ ಬಲಿಯಾಗುವಂತಾದನು. ಓರ್ವ ಅರ್ಚಕ, ಓರ್ವ ಮುಘಲ್ ಅಧಿಕಾರಿ ಹಾಗೂ ನರಸಿಂಹನ ಅಜ್ಜ, ಈ ಮೂವರೂ ಸಂಚುಹೂಡಿ 1647ರಲ್ಲಿ ಅವನನ್ನು ಕೊಂದು ಹಾಕಿದರು. ಮುಘಲ್ ಸೇನೆಯು ಅರಮನೆ ಹಾಗೂ ದೇವಾಲಯದ ಸಂಪತ್ತನ್ನು ದೋಚಿತು. ಆದರೆ ಹಿಂದಿನ ಸಂದರ್ಭಗಳಲ್ಲಿ ಕಂಡುಬಂದಂತೆ ಜಗನ್ನಾಥನ ಆರಾಧನೆ ನಿಲ್ಲುವಂತ ಅಥವಾ ದಾರುಪ್ರತಿಮೆಗಳನ್ನು ಪುರಿಯಿಂದ ಬೇರೆಡೆಗೆ ಕೊಂಡೊಯ್ಯುವಂತ ಪರಿಸ್ಥಿತಿ ತಲೆದೋರಲಿಲ್ಲ. ಇದು ನರಸಿಂಹನ ಕೊಲೆಯಲ್ಲಿ ಅರ್ಚಕವರ್ಗವು ಸಕ್ರಿಯವಾಗಿ ಭಾಗವಹಿಸಿದ್ದನ್ನು ಸ್ಪಷ್ಟಗೊಳಿಸುತ್ತದೆ ಎನ್ನುತ್ತಾರೆ ಕುಲ್ಕೆ.

ಪದಿನೇಳನೆಯ ಶತಮಾನ ಕೊನೆಗೊಳ್ಳುವ ವೇಳೆಗೆ ಗಜಪತಿಯ ವರ್ಚಸ್ಸು ಏರಿತ್ತು. ಜಗನ್ನಾಥನ ಈ ರಾವುತನನ್ನು ಈಗ ಚಲಂತೀ ವಿಷ್ಣು ಅಥವಾ ಚಲಿಸುವ ವಿಷ್ಣು ಎಂದು ಗುರುತಿಸಲಾಯಿತು.[12] ಅರಸನು ತನ್ನನ್ನು ದೇವತೆಯೊಂದಿಗೆ ಸಮೀಕರಿಸಿಕೊಳ್ಳುವ ಈ ಕ್ರಮವು ಹದಿನಾರು, ಹದಿನೇಳು, ಹದಿನೆಂಟನೆಯ ಶತಮಾನಗಳಲ್ಲಿ ಭಾರತದ ವಿವಿಧೆಡೆಗಳಲ್ಲಿ ತಲೆದೋರಿತ್ತು. ಆ ವೇಳೆಗಾಗಲೇ ಮುಂದೆ ಪುರಿಯು ಪಾಶ್ಚಿಮಾತ್ಯರ ಕಣ್ಣಲ್ಲಿ ತಿರಸ್ಕಾರಕ್ಕೆ ಕಾರಣವಾದ ಹಲವು ಆಚರಣೆಗಳು ಬೇರೂರಿಕೊಂಡಿತ್ತೆಂದು ತೋರುತ್ತದೆ. ಅಂಥ ಒಂದು ಆಚರಣೆಯೆಂದರೆ ರಥಯಾತ್ರೆಯ ಸಂದರ್ಭದಲ್ಲಿ ಭಕ್ತರು ರಥದ ಮುಂದೆ ಹಾರಿ ಅದರ ಚಕ್ರಕ್ಕೆ ಸಿಕ್ಕಿ ಪ್ರಾಣಾಹುತಿ ಮಾಡಿಕೊಳ್ಳುವುದು. ಐರೋಪ್ಯ ಪ್ರವಾಸಿಗಳಲ್ಲಿ ಅನೇಕರು ಇದನ್ನು ಬಣ್ಣಿಸಿದ್ದಾರೆ. ಪದಿನೇಳನೆಯ ಶತಮಾನದ ಇಂಗ್ಲಿಷ್ ವ್ಯಾಪಾರಿ ಥಾಮಸ್ ಬೌರೇ ಹೀಗೆಂದಿದ್ದಾನೆ:

"In the middle of that great Diabolic Chariot, is placed their great Diabolic Chariot, is placed their great patron Jno. Gernaet, having the foremost hand open, fairly to be beheld by many of the people… but more than one half are pressed down by the crowd.… And which is the stranger and more incredible, many of them come a great many miles to end their days here, under the wheels of this ponderous, but accounted by them, holy arke."[13] ಇಲ್ಲಿ ಬೌರೇ

ರಥಯಾತ್ರೆಯಲ್ಲಿ ಘಟಿಸುವ ಎರಡು ಬಗೆಯ ಮರಣಗಳನ್ನು ಉಲ್ಲೇಖಿಸಿದ್ದಾನೆ. ಒಂದು, ಅಪಾರ ಜನಸ್ತೋಮದ ನೂಕುನುಗ್ಗಲಿಗೆ ಸಿಕ್ಕಿ ಪ್ರಾಣ ಕಳೆದುಕೊಳ್ಳುವವರು. ಇನ್ನೊಂದು, ಸ್ವೇಚ್ಛೆಯಿಂದ ರಥಚಕ್ರಕ್ಕೆ ತಮ್ಮನ್ನು ಒಪ್ಪಿಸಿಕೊಳ್ಳವವರು. ಖ್ಯಾತ ಫ್ರೆಂಚ್ ಯಾತ್ರಿ ಫ್ರಾನ್ಸ್ವಾ ಬರ್ನಿಯೇ ಇದೇ ವಿಚಾರವನ್ನು ಈ ರೀತಿ ಬಣ್ಣಿಸಿರುವನು:

"The first day on which this idol is formally exhibited in the temple, the crowd is so immense and the press so violent that some of the pilgrims… in consequence of their long journey are squeezed to death. The surrounding throng gives them a thousand benedictions and considers them highly fortunate to die on such a holy occasion… and while the chariot of hellish triumph pursues its solemn march, persons are found… so blindly credulous… as to throw themselves on the ground in the way of its ponderous wheels which pass over and crush to atoms the bodies of the wretched fanatics…"[14]

ಇಂಥ ವರದಿಗಳು ಇನ್ನೂ ಅನೇಕ ಯಾತ್ರಿಕರ ಬರಹಗಳಲ್ಲಿ ಮೂಡಿಬಂದಿವೆ. ಇಂಗ್ಲಿಶ್‌ನಲ್ಲಿ ಉರುಳಿಬಂದು ಎಲ್ಲವನ್ನೂ ಸಪಾಟುಗೊಳಿಸಿಬಿಡುವ ಉರುಳುಬಂಡೆಯಂತ ವಿಶಾಲ ಯಂತ್ರವನ್ನು Juggernaut ಎನ್ನುತ್ತಾರೆ. Jagannath ಎಂಬ ನಾಮಪದವನ್ನು ಐರೋಪ್ಯರು ಬಹುಕಾಲ Juggernaut ಎಂದು ಬರೆಯುತ್ತಿದ್ದರು. ರಥಯಾತ್ರೆಯ ಸಂದರ್ಭದಲ್ಲಿ ನೂರಾರು ಜನರ ಮೇಲೆ ಉರುಳಿ ಅವರ ಜೀವ ತೆಗೆದುಕೊಳ್ಳುವ ಬೃಹದಾಕಾರದ ಜಗನ್ನಾಥನ ರಥ ಕುರಿತು ಯೂರೋಪ್‌ನಲ್ಲಿ ಪ್ರಚಾರ ಪಡೆದುಕೊಂಡ ಕಥೆಗಳೇ ಈ ಪ್ರಯೋಗವು ರೂಢಿಗತವಾಗಲು ಕಾರಣವಾದದ್ದು. ಹೀಗೆ ಪಾಶ್ಚಿಮಾತ್ಯ ಭಾವನೆಯಲ್ಲಿ ಪುರಿಯ ದೇವಾಲಯವು ಪರತ್ರ (exotic) ನೆಲೆಯಾಗಿ ಮೊಮ್ಮಿನಿಂತಿತು. ಇಪ್ಪತ್ತನೆಯ ಶತಮಾನದ ಅತ್ಯುತ್ತಮ ಚಲನಚಿತ್ರಗಳಲ್ಲಿ ಒಂದಾದ ಆರ್‌ಸನ್ ವೆಲ್ಸ್‌ನ ಸಿಟಿಜ಼ನ್ ಕೇನ್(*Citizen Kane*)ನಲ್ಲಿನ ಸನ್ನಿವೇಶವೊಂದರಲ್ಲಿ ರಂಗಮಂಚದ ವಾತಾವರಣಕ್ಕೆ ಪರತ್ರತೆಯ ಅಂಶವನ್ನು ತಂದುಕೊಳ್ಳಲು ಭಿತ್ತಿಯ ಮೇಲೆ ಜಗನ್ನಾಥ ದೇವಾಲಯದ ಚಿತ್ರವನ್ನು ಮೂಡಿಸಲಾಗಿರುವುದು ಪಾಶ್ಚಿಮಾತ್ಯ ಭಾವನೆಯಲ್ಲಿನ ಈ ಪರತ್ರತೆಯ ಆಳವನ್ನು ಸೂಚಿಸುತ್ತದೆ.

ಪುರಿಯಲ್ಲಿದ್ದ ಮತ್ತೊಂದು ಆಚರಣೆ ದೇವದಾಸಿಯರದು. ಇವರು ಮಹರಿ ಎಂಬ ನೃತ್ಯದಲ್ಲಿ ಪ್ರಾವೀಣ್ಯ ಹೊಂದಿದವರಾಗಿದ್ದರು. ಈ ದೇವದಾಸಿಯರು ಪುರಿ ಹಾಗೂ ಸುತ್ತಮುತ್ತಲ ಗ್ರಾಮಗಳಿಂದ ಬಂದವರು. ಸಣ್ಣ ವಯಸ್ಸಿನಲ್ಲೇ ಇವರನ್ನು ದೇವಾಲಯದ ಸೇವೆಗೆಂದು ಬಿಟ್ಟುಕೊಡಲಾಗುತ್ತಿತ್ತು. ಸಾಮಾನ್ಯವಾಗಿ ದೇವದಾಸಿಯರದೇ ಆದ ಮನೆತನಗಳಿರುತ್ತಿದ್ದು ಇವರು ಆ ಮನೆತನಗಳಿಂದ ಬಂದವರಾಗಿರುತ್ತಿದ್ದರು. ದೇವಾಲಯದಲ್ಲಿ ಮುಂಜಾನೆ ಜಗನ್ನಾಥನಿಗೆ ನಿದ್ದೆ ಬಿಡಿಸುವುದು, ರಾತ್ರಿ ಗೀತಗೋವಿಂದ ಹಾಡುವಾಗ ನರ್ತಿಸುವುದು ಹಾಗೂ ದಾರುಮೂರ್ತಿಗಳನ್ನು ಮಲಗಿಸುವುದು ಇವರ ಸೇವೆಗಳಾಗಿರುತ್ತಿದ್ದವು. ಅಲ್ಲದೆ ರಥಯಾತ್ರೆಯ ಅಂಗವಾಗಿ ದೇವದಾಸಿಯರು ಇತರ

ಹಾಡುವ, ಕುಣಿಯುವ ತಂಡದವರೊಂದಿಗೆ ಹಾಡಿಕುಣಿದು ಉತ್ಸವಕ್ಕೆ ಬಣ್ಣ ತುಂಬುತ್ತಿದ್ದರು. ಪಾಹುಡದ ಸಂದರ್ಭದಲ್ಲಿ ಜಗನ್ನಾಥನಿಗೂ ಲಕ್ಷ್ಮೀಮಾತೆಗೂ ಪರಸ್ಪರ ವಾಗ್ವಾದ ನಡೆಯುತ್ತಿತ್ತು. ಈ ವಿಧಿವತ್ತಾದ ವಾಗ್ವಾದಾಚರಣೆಯಲ್ಲಿ ದೈತಾಪತಿಗಳು ಜಗನ್ನಾಥನನ್ನೂ ದೇವದಾಸಿಯರು ಲಕ್ಷೀಮಾತೆಯನ್ನೂ ಪ್ರತಿನಿಧಿಸುತ್ತಿದ್ದರು. ಲೈಂಗಿಕ ಅತಿರೇಕಗಳಿಂದ ತುಂಬಿದ ಈ ಆಚರಣೆ ಈಗ ಇಲ್ಲವಾದರೂ ಅಂದಿನ ಪಾಹುಡಮಹೋತ್ಸವದ ಪ್ರಮುಖ ಆಕರ್ಷಣೆಗಳಲ್ಲಿ ಒಂದಾಗಿತ್ತು.[15] ದೇವದಾಸಿಯರ ಕುರಿತು ಬೌರೇ ಹೀಗೆಂದಿದ್ದಾನೆ:

"These dancinge Women have a privilege above all Others in these Easterne parts, which causeth such multitudes to Endeavour to attain Such Employs, where they may Enjoy Earthly pleasure Enough, without any Scandall to themselves or relations. They are wholly at their own choice whether they will marry or noe, or live Subject to any one man and have the liberty to be made use of by whom they please; therefore I think Seldom or never that they leave their life to retire to theire homes and lead a Chast [*sic*] life, or to marry, whereby theire pleasure is very uncertain..."[16]

ಬೌರೇ ಹೇಳುವಂತೆ ದೇವದಾಸಿಯರಿಗೆ ಅಪಾರ ಲೈಂಗಿಕ ಸ್ವಾತಂತ್ರ್ಯವಿತ್ತು, ಇಷ್ಟವಾದವರ ಜೊತೆ ಮಲಗಿ ಸುಖಿಸಬಹುದಿತ್ತು, ಆದ್ದರಿಂದ ಅವರು ಅನೇಕ ಪ್ರತಿಬಂಧಗಳಿರುವ ವೈವಾಹಿಕ ಜೀವನದ ಬಗ್ಗೆ ಆಸಕ್ತಿ ತೋರಲಿಲ್ಲ. ಈ ಮಾತಿನಲ್ಲಿ ನಿಜಾಂಶ ಇಲ್ಲದಿಲ್ಲ. ಆದರೆ ಸಣ್ಣ ವಯಸ್ಸಿನಲ್ಲೇ ದೇವದಾಸಿಯರಾಗಿ ದೇವಾಲಯ ಸೇರುವ ಹೆಣ್ಣುಮಗಳು ಎಷ್ಟೇ ಸುಖ ಅನುಭವಿಸಿದರೂ ಆಳುವ ಹಾಗೂ ಅರ್ಚಕವರ್ಗದವರ ದೌರ್ಜನ್ಯಗಳನ್ನು ಅನುಭವಿಸುವಂತ ಪರಿಸ್ಥಿತಿಯೂ ಅದರ ವಿಡಂಬನೆಗಳೂ ಇವೆ ಎಂಬ ಅರಿವು ಬೌರೇಗೆ ಇದ್ದಿರಲಿಕ್ಕಿಲ್ಲ.[17] ಕಷ್ಟಕಾರ್ಪಣ್ಯಗಳಿಲ್ಲದ, ಕೇವಲ ಸುಖವನ್ನಷ್ಟೇ ನೀಡುವ ವೃತ್ತಿಗಳು ವಿರಳವಷ್ಟೇ? ದೇವದಾಸಿಯರದು ಖಂಡಿತ ಅವುಗಳಲ್ಲಿ ಒಂದಾಗಿರಲಿಲ್ಲ.

ಭಾರತದ ಧಾರ್ಮಿಕ ಪರಂಪರೆಯು ಈ ತರಹದ ಹೀನ ವೃತ್ತಿಗಳನ್ನೂ ಆಚರಣೆಗಳನ್ನೂ ಅನುಮೋದಿಸುತ್ತದೆ ಎಂದು ಅಂದಿನ ಐರೋಪ್ಯ ಯಾತ್ರಿಕರಲ್ಲಿ ಅನೇಕರು ಹೇಳಿದ್ದಾರೆ. ದೇವದಾಸಿಯರ ಕುರಿತ ಬರ್ನಿಯೇನ ಈ ಪರಾವರ್ಶೆ ಅವುಗಳಲ್ಲಿ ಒಂದು:

"In front of the Chariot, and even in the Deuras or Idol temples, public women during festival days dance and throw their bodies into a variety of indecent and preposterous attitudes, which the Brahmins deem quite consistent with the religion of their country. I have known females celebrated in beauty, and who were remarkably reserved in their general deportment refuse valuable presents from Mahometans, Christians and even Gentile foreigners because they consider themselves dedicated to the ministry and to the minister of the Deura, to the Brahmins and to those Fakirs, who are commonly seated on ashes all around the temple..."[18]


ಔರಂಗಜ಼ೇಬ್


ಜಹಾಂಗೀರ್


ಮುರ್ಷಿದ್ ಖುಲೀ ಖಾನ್


ಶಾಹ್ ಜಹಾನ್

ಬರ್ನಿಯೇನ ಮತ್ತೊಂದು ವಕ್ತವ್ಯ ಹೀಗಿದೆ:

"The Bramens encourage and promote these gross errors and superstitions to which they are indebted for their wealth and consequence. As persons attached and consecrated to important mysteries, they are held in general veneration and enriched by the alms of the people. So wiched and detestible are their tricks and impostures that I required the full and clear evidence of them... ere I could believe they had recourse to similar expedients."[19]

ಮೂರು ದಶಕಗಳ ಶಾಹ್ ಜಹಾನ್ ಕಾಲದ ಶಾಂತಿಯುತ ವಾತಾವರಣದಲ್ಲಿ ಗಜಪತಿ ನರಸಿಂಹನ ಕೊಲೆಯಂತ ದಾರುಣ ಘಟನೆಗಳು ನಡೆದರೂ ಸ್ಥಿತಿ ಸಂಘರ್ಷಭರಿತವೋ ಅಸ್ಥಿರವೋ ಆಗಿರಲಿಲ್ಲ. ಶಾಹ್ ಜಹಾನ್‌ನ ಕೊನೆಯ ದಿನಗಳಲ್ಲಿ ಅವನ ಪುತ್ರರ ನಡುವೆ ಪಟ್ಟಾರೋಹಣಕ್ಕೆಂದು ನಡೆದ ಸಮರದ ವೇಳೆಯಲ್ಲಿ ಖುರ್ಧಾ ರಾಜಮನೆತನವು ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿತು. ಔರಂಗಜ್ಹೇಬ್ ಅಧಿಕಾರಕ್ಕೆ ಬಂದ ತರುವಾಯ (ಆಳ್ವಿಕೆ 1657–1707) ಪುನಃ ಗಜಪತಿ–ಜಗಪತಿಗಳ ನಡುವಿನ ನಂಟು ಡೋಲಾಯಮಾನವಾಗತೊಡಗಿತು. ಗಜಪತಿ ಮುಕುಂದನನ್ನು ಸದೆಬಡಿದು ಖಾನ್ ಎ ದೌರಾನ್ ಮುಘಲ್ ಮೇಲಾಳ್ವಿಕೆಯನ್ನು ಮತ್ತೊಮ್ಮೆ ಒಡಿಶ್ಶಾದ ಮೇಲೆ ಹೇರಿದನು. ಈ ವೇಳೆಗಾಗಲೇ ಜಗನ್ನಾಥನಿಗೆ ಪೋಷಣೆ ನೀಡುವ ಮೂಲಕ ಸ್ಥಳೀಯ ಜನಾಂಗಗಳ ಮೇಲೆ ತಮ್ಮ ಸ್ವಾಮ್ಯವನ್ನು ಸಾಧಿಸುವ ಸಂಕೀರ್ಣವಾದ ಪೈಪೋಟಿಯೊಂದು ಅದರ ಪೂರ್ಣ ವಿಕಾಸ ಹೊಂದಿತು. ಅರ್ಚಕ ವರ್ಗ, ಖುರ್ಧಾದ ಗಜಪತಿ ಹಾಗೂ ಕಟಕ್‌ನ ಸುಬಹ್‌ದಾರ್, ಇವರು ಆಯಾ ಸಂದರ್ಭದ ಲಾಭ ಪಡೆದು ಸಂಘರ್ಷ–ಸೌಹಾರ್ದಗಳ ಹೊಸ ಸಂಬಂಧಗಳನ್ನು ನಿರಂತರ ಬೆಸೆಯುವಂತಾದರು.[20] ನಿಷ್ಠೆ, ಮೈತ್ರಿ ಸಂಬಂಧ, ಬಾಂಧವ್ಯಗಳೆಲ್ಲವೂ ಆರ್ಥಿಕ, ರಾಜಕೀಯ ಲಾಭವನ್ನು ಆಧರಿಸಿ ಮೂಡಿಬರುವ ಯಾ ಮಾರ್ಪಡುವಂತ ಕಾಲಮಾನವು ಇದಾಗಿತ್ತು.

ಹೀಗಿರುವಾಗ 1669ರಲ್ಲಿ ಔರಂಗಜ್ಹೇಬ್ ತನ್ನ ಅಧಿಕಾರ ಕಾಲದ ತೀವ್ರ ನಿರ್ಧಾರಗಳಲ್ಲಿ ಒಂದನ್ನು ತೆಗೆದುಕೊಂಡು ಆದೇಶವೊಂದನ್ನು ಹೊರಡಿಸಿದನು. ಇತ್ತೀಚೆಗೆ ನಿರ್ಮಿಸಲಾದ ಎಲ್ಲ ಹಿಂದೂ ದೇವಾಲಯಗಳನ್ನೂ ನೆಲಸಮಗೊಳಿಸಬೇಕು, ಹೊಸದಾಗಿ ಯಾವುದೇ ಹಿಂದೂ ದೇವಾಲಯಗಳನ್ನು ನಿರ್ಮಿಸಕೂಡದು, ಇದುವೇ ಈ ಆದೇಶವಾಗಿತ್ತು. ಒಡಿಶ್ಶಾದಲ್ಲಿ ಈ ಆದೇಶದನ್ವಯ ಕೆಲವು ಪುರಾತನ ದೇವಾಲಯ ಗಳನ್ನೂ ಒಡೆದು ಹಾಕಲಾಯಿತು. ಅವುಗಳ ಸಾಲಲ್ಲಿ 1686ರಲ್ಲಿ ಕೆಡವಲಾದ ಝಾಂಕಡಾದ ಶಾರಳಾ ದೇವಾಲಯ ಮತ್ತು 1687ರಲ್ಲಿ ಉರುಳಿಸಲಾದ ಜಾಜ್‌ಪುರ್‌ನ ಕೆಲವು ದೇವಾಲಯಗಳು ಸೇರಿವೆ ಎನ್ನುತ್ತಾರೆ ಕುಲ್ಕೆ.[21] ಆದಾಗ್ಯೂ ಪುರಿಯ ದೇವಾಲಯದ ಮೇಲೆ ಹಲ್ಲೆ ನಡೆಯಲಿಲ್ಲ. ಮಾತ್ರವಲ್ಲ, ಅಲ್ಲಿ ಅನೇಕ ಹೊಸ ಕಿರುದೇವಾಲಯಗಳ ನಿರ್ಮಾಣಕಾರ್ಯ ನಡೆಯಿತೆಂದು ಮಾದಳಾಪಾಂಜಿ ಉಲ್ಲೇಖಿಸುತ್ತದೆ.[22] ಕಟಕ್‌ನ ಸುಬಹ್‌ದಾರ್ ಪುರಿಯ ಮೇಲೆ ದಂಡಯಾತ್ರೆ ಕೈಗೊಂಡರೂ ಅದು ಯಶಸ್ವಿಯಾಗಲಿಲ್ಲ, ಸಿಡಿಲ ಬಡಿತದಿಂದ ಪಡೆಯು ಹಿಂತಿರುಗಬೇಕಾಯಿತು ಎನ್ನಲಾಗಿದೆ.[23] ಕೊನೆಗೆ, 1692ರಲ್ಲಿ ಔರಂಜ್ಹೇಬ್ ಪುರಿಯ

ಶ್ರೀಮಂದಿರವನ್ನು ಧ್ವಂಸಗೊಳಿಸಬೇಕೆಂದು ಆದೇಶ ಹೊರಡಿಸಿದ. ಆದರೆ ಗಜಪತಿ ದಿಬ್ಯಸಿಂಹನೊಂದಿಗೆ ಕೈಜೋಡಿಸಿದ ಸುಬಹ್‌ದಾರ್ ಜಗನ್ನಾಥನ ಮೂರ್ತಿಯನ್ನು ನಾಶಪಡಿಸಲಾಗಿದೆ ಎಂದು ಸುಳ್ಳುವರದಿ ಸಲ್ಲಿಸಿ, ಖೊಟ್ಟಿ ವಿಗ್ರಹವೊಂದನ್ನು ಔರಂಗಜೇಬ್‌ಗೆ ಕಳುಹಿಸಿಕೊಟ್ಟನು. ಇದಾದ ಬಳಿಕ ಬಹುಕಾಲ ದೇವಾಲಯದ ಬಾಗಿಲನ್ನು ತೆರೆಯದೆ ಇಡಲಾಯಿತು. ಈ ಅವಧಿಯಲ್ಲಿ ಜಗನ್ನಾಥನ ಪೂಜೆ ಗುಪ್ತವಾಗಿ ನಡೆಯಿತು.[24] ಈ ಕುರಿತ ಸಂಶಯ ಮೂಡಿದಾಗ ಔರಂಗಜೇಬ್ ಓರ್ವ ಅಧಿಕಾರಿಯನ್ನು ಸತ್ಯಾಂಶ ತಿಳಿಯಲೆಂದು ಒಡಿಶ್ಶಾಗೆ ಕಳಿಸಿದನಾದರೂ ಗಜಪತಿಯು ಅವನಿಗೆ 30,000 ರೂಪಾಯಿಗಳ ಕಾಣಿಕೆಯಿತ್ತು ತಪ್ಪು ವರದಿಯನ್ನೇ ಔರಂಗಜೇಬ್‌ಗೆ ಮುಟ್ಟಿಸುವಂತೆ ಮಾಡಿದನು. ಮುಘಲ್ ಆಡಳಿತ ವ್ಯವಸ್ಥೆಯಲ್ಲಿನ ಲೋಪದೋಷಗಳಿಗೆ ಈ ವೃತ್ತಾಂತವು ಒಳ್ಳೆಯ ನಿದರ್ಶನವಾಗಿದೆ.

1707ರಲ್ಲಿ ಔರಂಗಜೇಬ್ ನಿಧನಹೊಂದಿದನು. ಆ ಬಳಿಕ ಒಡಿಶ್ಶಾ ಪ್ರಾಂತ್ಯವು ಮುಘಲ್ ಆಳ್ವಿಕೆಯ ಕೈ ತಪ್ಪಿ ಬಂಗಾಳದ ನವಾಬ್‌ನ ಹಿಡಿತಕ್ಕೆ ಬಂದಿತು. ಮೊದಲನೆಯ ನವಾಬ್ ಮುರ್ಶಿದ್ ಖುಲೀ ಖಾನ್‌ನ ಕಾಲದಲ್ಲಿ ಅವನ ಮಗ ಶುಜಾ ಉದ್ ದೀನ್ ಒಡಿಶ್ಶಾದ ಸುಬಹ್‌ದಾರ್ ಆಗಿದ್ದನು. 1727ರಲ್ಲಿ ಖುಲೀ ಖಾನ್ ಮೃತಪಟ್ಟಾಗ ಶುಜಾ ಉದ್ ದೀನ್ ನವಾಬ್ ಸ್ಥಾನಕ್ಕೆ ಬಂದು ತನ್ನ ಮಗ ತಾಕೀ ಖಾನ್‌ನನ್ನು ಕಟಕ್‌ನಲ್ಲಿ ಸುಬಹ್‌ದಾರ್ ಆಗಿ ನೇಮಿಸಿದನು. ಅಲ್ಲಿಂದಾಚೆಗೆ ಸಂಘರ್ಷಗಳು ಮತ್ತೆ ಚುರುಕುಗೊಂಡವು.

ಈ ಸಂಘರ್ಷಕ್ಕೆ 1726ರಲ್ಲಿ ಅಧಿಕಾರ ವಹಿಸಿಕೊಂಡ ಗಜಪತಿ ಇಮ್ಮಡಿ ರಾಮಚಂದ್ರನ ಕೆಲವು ಕಾರ್ಯಾಚರಣೆಗಳು ಕಾರಣವಾಗಿದ್ದವೆಂದು ತೋರುತ್ತದೆ. 1724ರಲ್ಲಿ ಮುಘಲ್ ಹಿಡಿತದಿಂದ ಸ್ವತಂತ್ರನಾದ ಹೈದರಾಬಾದ್‌ನ ನಿಜಾಮನು ಈಗಾಗಲೇ ಒಡಿಶ್ಶಾದ ಚಿಲಿಕಾ ಸರೋವರದವರೆಗಿನ ಪ್ರದೇಶವನ್ನು ತನ್ನ ವಶಕ್ಕೆ ತಂದುಕೊಂಡಿದ್ದನು. ಖುರ್ಧಾದ ಗಜಪತಿಗಳು ಕ್ಷೇತ್ರವಿಸ್ತರಣೆಯಲ್ಲಿ ಈ ತನಕ ಯಾವುದೇ ಆಸಕ್ತಿ ತೋರಿರಲಿಲ್ಲ. ತಮ್ಮ ರಾಜ್ಯದ ದಕ್ಷಿಣಕ್ಕಿದ್ದ ಪ್ರಾಂತ್ಯಗಳು ಹೈದರಾಬಾದ್ ವಶವಾಗಿ ಹೋದ್ದರಿಂದ ಆ ದಿಕ್ಕಿನಲ್ಲಿ ರಾಜ್ಯವಿಸ್ತರಣೆ ನಡೆಸುವುದು ಸಮಂಜಸವಲ್ಲ ಎಂದು ನರಸಿಂಹನಿಗೆ ತೋರಿರಬಹುದು. ಈ ಕಾರಣದಿಂದ ಅವನು ಮಧ್ಯ ಒಡಿಶ್ಶಾದ ಪ್ರದೇಶಗಳನ್ನು ಲಕ್ಷ್ಯವಾಗಿರಿಸಿಕೊಂಡು ತನ್ನ ಬಕ್ಷಿಯೋರ್ವನನ್ನು ಸೈನಿಕ ಕಾರ್ಯಾಚರಣೆಗೆಂದು ಕಳುಹಿಸಿಕೊಟ್ಟನು. ಇದು ತಾಕೀ ಖಾನ್‌ನನ್ನು ಕೆರಳಿಸಿರಬೇಕು. 1730ರಲ್ಲಿ ಖುರ್ಧಾದ ಸೈನಿಕರು ರಾಮಚಂದ್ರನ ವಿರುದ್ಧ ವಿದ್ರೋಹ ನಡೆಸಿದ್ದು ತಾಕೀ ಖಾನ್‌ಗೆ ಸುವರ್ಣ ಅವಕಾಶವೊಂದನ್ನು ಒದಗಿಸಿಕೊಟ್ಟಿತು. ತಾಕೀ ಖಾನ್ ರಾಮಚಂದ್ರನನ್ನು ಬಂಧಿಸಿ ಬಹುಕಾಲ ಕಟಕ್‌ನ ತನ್ನ ಸೆರೆಯಲ್ಲಿರಿಸಿದನು. ಈ ಕಾಲದಲ್ಲಿ ರಾಮಚಂದ್ರನಿಗೆ ತಾಕೀ ಖಾನ್‌ನ ಮಗಳಲ್ಲಿ ಅನುರಾಗ ಮೂಡಿ, ಅವಳನ್ನು ವರಿಸಿಕೊಂಡು, ಮತಾಂತ್ರ ಹೊಂದಿ ಮುಸಲ್ಮಾನನಾದನೆಂದು ಮಾದಳಾಪಾಂಜಿ ಹೇಳುತ್ತದೆ.[25] ಜಾತಿಭ್ರಷ್ಟನಾದ ರಾಮಚಂದ್ರನಿಗೆ ಸೆರೆವಾಸ ಮುಗಿದು ಬಿಡುಗಡೆಯಾದಾಗ ಶ್ರೀಮಂದಿರದೊಳಕ್ಕೆ ಪ್ರವೇಶ ನಿಷೇಧಿಸಲಾಯಿತು. ಆಗ ತನ್ನ ಪರಮಭಕ್ತನಿಗೆ ದರ್ಶನ ನೀಡಲೆಂದು ದೇವಾಲಯದ ಸಿಂಹದ್ವಾರದಲ್ಲಿ ಜಗನ್ನಾಥನು ಪ್ರತ್ಯಕ್ಷನಾದನೆಂದು ಹೇಳಲಾಗಿದೆ. ಪತಿತನನ್ನು ಪಾವನಗೊಳಿಸಲು ಬಂದ ಈ ದೇವತಾ ಮೂರ್ತಿಯೇ ಇಂದು ಸಿಂಹದ್ವಾರದ ಗುಮ್ಮಟದಲ್ಲಿರುವ ಪತಿತಪಾವನ ಪ್ರತಿಮೆ ಎಂದು ಪ್ರತೀತಿ.

ಮುಂದಿನ ದಿನಮಾನಗಳಲ್ಲಿ ಶ್ರೀಮಂದಿರದೊಂದಿಗನ ತನ್ನ ಸಂಬಂಧವನ್ನು ಪುನಃ ಸ್ಥಾಪಿಸಿಕೊಳ್ಳಲು ರಾಮಚಂದ್ರನು ಹಲವಾರು ತಂತ್ರಗಳನ್ನು ಹೂಡಿದನು. ದಾರುಮೂರ್ತಿಗಳನ್ನು ಶ್ರೀಮಂದಿರದಲ್ಲಿಡುವುದು ಸುರಕ್ಷಿತವಲ್ಲ ಎಂಬ ನೆವದಲ್ಲಿ ಅನೇಕ ಸಲ ಮೂರ್ತಿಗಳನ್ನು ಅಲ್ಲಿಂದ ಹೊರತೆಗೆಸಿ ಚಿಲಿಕಾ ಸರೋವರದ ನಡುವಿನ ದ್ವೀಪದಲ್ಲಿ ತಂದಿಟ್ಟನು. ಜಾತಿಭ್ರಷ್ಟನಾದವನಿಗೆ ಜಗದ್ಕಾರಣನೊಂದಿಗೆ ಹೊಸದೊಂದು ಬಾಂಧವ್ಯವನ್ನು ಬೆಸೆದುಕೊಳ್ಳುವುದು ಅನಿವಾರ್ಯವಾಗಿತ್ತು. ಅದುವೇ ಈ ಕೃತ್ಯಗಳ ಹಿಂದಿನ ಪ್ರೇರಣೆಯಾಗಿದ್ದವು ಎಂದರೆ ಸುಳ್ಳಾಗಲಾರದು.

1733ರಲ್ಲಿ ಎರಡು ಆಶಾಢಮಾಸಗಳು ಬಂದುದರಿಂದ ನಬಕಳೇಬರ ಮಹೋತ್ಸವ ನಡೆಯಬೇಕಿತ್ತು. ಆದರೆ ಆಗ ಮೂರ್ತಿಗಳು ಪುರಿಯಲ್ಲಿರಲಿಲ್ಲ. 1732ರಲ್ಲಿ ರಾಮಚಂದ್ರನ ಮಗ ವೀರಕೇಸರಿಗೆ ಗಜಪತಿ ಪಟ್ಟ ಕರುಣಿಸಿದ ತಾಕೀ ಖಾನ್ ಈಗ ಅವನ ಕೈಯ್ಯಲ್ಲೇ ನಬಕಳೇಬರ ನಡೆಸಿ ಪುರಿಯ ಅರ್ಚಕವರ್ಗದ ನಡುವೆ ತನ್ನ ವರ್ಚಸ್ಸನ್ನು ಹೆಚ್ಚಿಸಿಕೊಳ್ಳಲು ಹವಣಿಸಿದನು. ಈ ನಿಟ್ಟಿನಲ್ಲಿ ಹೊಸ ಮೂರ್ತಿಗಳನ್ನು ತಯಾರಿಸುವ ಕಾರ್ಯಕ್ಕೆ ಚಾಲನೆಯನ್ನೂ ನೀಡಲಾಯಿತು. ಆದರೆ ಆ ಶ್ರಮವು ಯಶಸ್ವಿಯಾಗಲಿಲ್ಲ. ಹಳೆಯ ಮೂರ್ತಿಗಳ ಒಳಗಿದ್ದ ಬ್ರಹ್ಮಪದಾರ್ಥವಿಲ್ಲದೆ ನಬಕಳೇಬರ ನಡೆಯುವಂತಿರಲಿಲ್ಲ. ಬ್ರಹ್ಮಪದಾರ್ಥವು ರಾಮಚಂದ್ರನ ಕೈಯ್ಯಲ್ಲಿತ್ತು. ಇದರ ಸುಯೋಗ ಪಡೆದ ರಾಮಚಂದ್ರನ ತಾನೇ ನಬಕಳೇಬರ ನಡೆಸಿದನು. ತಾಕೀ ಖಾನ್ ಇದನ್ನು ವಿರೋಧಿಸುವ ಸ್ಥಿತಿಯಲ್ಲಿರಲಿಲ್ಲ. ಮೂರ್ತಿಗಳು ಪುರಿಯಲ್ಲಿರುವಂತೆ ನೋಡಿಕೊಳ್ಳುವುದು ಅಗತ್ಯವಾಗಿತ್ತು. ಇಲ್ಲದಿದ್ದಲ್ಲಿ ಪ್ರತಿವರ್ಷ ತೀರ್ಥಾಟಕ ಶುಲ್ಕದಿಂದ (ಜಾತ್ರೀ ಹಾಸಿಲೀ) ಖಜ಼ಾನೆಗೆ ಬರುವ ಒಂಬತ್ತು ಲಕ್ಷ ರೂಪಾಯಿಗಳು ನಷ್ಟವಾಗಿ ಬಿಡುತ್ತಿದ್ದವು.

ಪದಿನೇಳನೆಯ ಶತಮಾನದ ಉತ್ತರಾರ್ಧದಿಂದ ಪದಿನೆಂಟನೆಯ ಶತಮಾನದ ಪೂರ್ವಾರ್ಧದವರೆಗೆ ಖುರ್ಧಾದ ಗಜಪತಿಗಳು ಛಾಮೂ ಛಿತಾಲು ಎಂಬ ಪತ್ರಗಳನ್ನು ಬರೆಯುವ ಹೊಸ ರಾಜತಾಂತ್ರಿಕ ನೀತಿಯನ್ನು ತಮ್ಮದಾಗಿಸಿಕೊಂಡಿದ್ದರು. ಇಂತ ಸುಮಾರು ನೂರು ಪತ್ರಗಳು ನಮಗೆ ಒದಗಿಬಂದಿವೆ. ನೆರೆಹೊರೆಯ ಗಡಜಾತ ದೊರೆಗಳಿಗೆ ಯಾ ಅರ್ಚಕವರ್ಗದವರಿಗೆ ಬರೆದ ಈ ಪತ್ರಗಳಲ್ಲಿ ಗಡಜಾತರಿಗೆ ಪುರಿ ದೇವಾಲಯದಲ್ಲಿ ವಿಶೇಷ ಪೂಜೆ, ಸೇವೆಸಲ್ಲಿಸುವ ಅಧಿಕಾರವನ್ನು ನೀಡಲಾಗಿತ್ತು. ಈ ಮೂಲಕ ಗಡಜಾತರೊಂದಿಗೆ ಮೈತ್ರಿ ಸಾಧಿಸಿ ತಮ್ಮ ಸ್ಥಾನವನ್ನು ದೃಢಪಡಿಸಿಕೊಳ್ಳುವುದು ಗಜಪತಿಗಳ ಉದ್ದೇಶವಾಗಿತ್ತು.[26] ರಾಮಚಂದ್ರನು ಹೊರಡಿಸಿದ ಇಂಥ ಹದಿನಾಲ್ಕು ಪತ್ರಗಳು ಇಂದು ಲಭ್ಯವಾಗಿವೆ. ಇವುಗಳಲ್ಲಿ ಹನ್ನೊಂದನ್ನು 1733ರಲ್ಲಿಯೇ ಬರೆಯಲಾಗಿದ್ದು ಅವುಗಳಲ್ಲಿ ಬರಂಬ, ತಿಗಿರಿಯಾ, ಖಂಡಪಾಡಾ, ರಾಣಪುರ, ಬಿಲ್ಲೀಕೋಟ ಮೊದಲಾದ ದೊರೆಗಳಿಗೆ ವಿಶೇಷ ಸೇವೆಯ ಅನುಮತಿ ನೀಡಲಾಗಿದೆ. ತಾಕೀ ಖಾನ್ ಹಾಗೂ ವೀರಕೇಸರಿಯೊಂದಿಗಿನ ಸಂಘರ್ಷದಲ್ಲಿ ಈ ಪತ್ರಗಳು ತನ್ನ ಅಧಿಕಾರಕ್ಕೆ ಹೆಚ್ಚಿನ ಬೆಂಬಲ ಪಡೆದುಕೊಳ್ಳುವಲ್ಲಿ ರಾಮಚಂದ್ರನಿಗೆ ನೆರವಾದವು. ಈ ಮೂಲಕ ಒಮ್ಮೆ ಜಾತಿಭ್ರಷ್ಟತೆಯಿಂದ ಪತಿತನಾಗಿ ಹೋದವನು ತಿರುಗಿ ದೇವಾಲಯದ ಆಗುಹೋಗುಗಳಲ್ಲಿ ಮಹತ್ವದ ಪಾತ್ರವಹಿಸುವಂತಾದನು.

1735ರಲ್ಲಿ ತಾಕೀ ಖಾನ್ ಮರಣಹೊಂದಿ ಇಮ್ಮಡಿ ಮುರ್ಶಿದ್ ಖುಲೀ ಖಾನ್ ಸುಬಹ್‌ದಾರ್ ಪದವಿಗೆ ಬಂದಾಗ ರಾಮಚಂದ್ರನು ತನ್ನ ಹಳೆಯ ಆಟಗಳನ್ನು ಮತ್ತೆ

ಆರಂಭಿಸಿ ದಾರು ಮೂರ್ತಿಗಳನ್ನು ಸುರಕ್ಷೆಯ ಹೆಸರಲ್ಲಿ ಪುರಿಯಿಂದ ಅಠಗಡಕ್ಕೆ ಕೊಂಡೊಯ್ದಿಟ್ಟನು.[27] ಆದರೆ ಘುಲೀ ಖಾನ್ ಈ ತಂತ್ರಕ್ಕೆ ಮಣಿಯಲಿಲ್ಲ. ತನ್ನ ಬಂಟ ಮೀರ್ ಹಬೀಬ್‌ನನ್ನು ಅಠಗಡಕ್ಕೆ ಕಳುಹಿಸಿ ಬಲವಂತವಾಗಿ ಮೂರ್ತಿಗಳನ್ನು ವಶಪಡಿಸಿಕೊಂಡು ಪುರಿಗೆ ತಂದು ರತ್ನಸಿಂಹಾಸನದ ಮೇಲೆ ಕುಳ್ಳಿರಿಸುವಂತೆ ಮಾಡಿದನು. 1739ರಲ್ಲಿ ಅವನು ವೀರಕೇಸರಿಯನ್ನು ಗಜಪತಿ ಎಂದು ಘೋಷಿಸಿದನು. ಈ ಉಪಕಾರಕ್ಕೆ ಪ್ರತಿಯಾಗಿ ವೀರಕೇಸರಿಯು ಸುಬಹ್‌ದಾರ್‌ಗೆ ಅಪಾರ ಹಣವನ್ನು ಕಾಣಿಕೆಯಾಗಿ ನೀಡಲು ಒಪ್ಪಿಕೊಂಡನು. ಈ ಹಿಂದೆ ಪಟ್ಟಿಯಾದ ಪದ್ಮನಾಭನನ್ನು ಗಜಪತಿ ಎಂದು ನೇಮಿಸಲಾಗಿತ್ತು. ಬಹುಶಃ ಪದ್ಮನಾಭನು ಕಾಣಿಕೆ ನೀಡುವ ವಾಗ್ದಾನ ನಡೆಸಿ ಈ ಸ್ಥಾನವನ್ನು ಪಡೆದುಕೊಂಡಿರಬಹುದೆಂದು ಕುಲ್ಕೆ ಊಹಿಸಿದ್ದಾರೆ. ಕೊಟ್ಟಮಾತಿಗೆ ತಪ್ಪಿದಾಗ ಅವನನ್ನು ಆ ಸ್ಥಾನದಿಂದ ತೆಗೆದು ವೀರಕೇಸರಿಗೆ ಪಟ್ಟಕಟ್ಟಲಾಗಿರಬಹುದು ಎನ್ನುತ್ತಾರೆ ಕುಲ್ಕೆ.[28] ಛಾಮೂ ಛಿಠಾಲು ನೀತಿಯನ್ನು ವೀರಕೇಸರಿ ಸಕ್ರಿಯವಾಗಿ ಮುಂದುವರೆಸಿಕೊಂಡು ಹೋದನು. ಒಟ್ಟು ಮುವತ್ತನಾಲ್ಕು ಛಾಮೂ ಛಿಠಾಲುಗಳನ್ನು ಬರೆದಿದ್ದಾನೆ ವೀರಕೇಸರಿ. ಈ ಪೈಕಿ 1742–51 ಕಾಲಕ್ಕೆ ಸೇರಿದ ಇಪ್ಪತ್ತನಾಲ್ಕು ಪತ್ರಗಳಿವೆ. ಇವುಗಳಲ್ಲಿ ದೆಹಲಿ, ಅಸಂ ಪ್ರದೇಶದ ಯಾತ್ರಿಕರಲ್ಲದೆ ಹದಿನೈದು ದೊರೆಗಳಿಗೆ ದೇವಾಲಯದಲ್ಲಿ ವಿಶೇಷ ಸೇವೆ ಸಲ್ಲಿಸುವ ಅಧಿಕಾರವನ್ನು ನೀಡಿದ್ದಾನೆ. ಈ ಹದಿನೈದು ಮಂದಿ ಗಡಜಾತರೆಂದರೆ ಕುಜಾಂಗ, ರಾಣಪುರ, ನಯಾಗಡ, ಬಾಂಕಿ, ತಿಗಿರಿಯಾ, ಅನುಗೂಲ, ಢೆಂಕನಾಲ್, ತಾಲ್ಚೇರ್, ಸೋನಪುರ, ಘುಮ್‌ಸುರ, ಭಾನಪುರ, ಅಠಗಡ, ಖಲ್ಲೀಕೋಟ ಮತ್ತು ತೆಕ್ಕಲಿ.[29]

ಅಠಗಡದ ದೊರೆಗೆ ವೀರಕೇಸರಿ ನೀಡಿದ ಅಧಿಕಾರವನ್ನು ಕುಲ್ಕೆ ಉದಾಹರಣೆಯಾಗಿ ತೆಗೆದು ಕೊಂಡು ವಿಶ್ಲೇಷಿಸಿದ್ದಾರೆ. ಅಠಗಡದ ರಘುನಾಥನು 1731ರಲ್ಲಿ ವೀರಕೇಸರಿಗೆ ರಕ್ಷಣೆ ನೀಡಿದ್ದ. 1733–36ರ ಮಧ್ಯದಲ್ಲಿ ರಾಜಾ ಜಗನ್ನಾಥನು ಪುರಿಯ ದಾರುಮೂರ್ತಿಗಳನ್ನು ಸಂರಕ್ಷಿಸಲು ಅಠಗಡವಲ್ಲಿ ಗುಡಿಕಟ್ಟಿಸಿ ಮೂರುಗ್ರಾಮಗಳನ್ನು ದತ್ತಿ ನೀಡಿದ್ದ. ಈ ಉಪಕಾರ ಸ್ಮರಣಾರ್ಥ ವೀರಕೇಸರಿ 1746ರಲ್ಲಿ ಅಠಗಡ ರಾಜಮನೆತನದವರಿಗೆ ಹರಿಚಂದನ ಜಗದೇವ ಎಂಬ ಬಿರುದು ನೀಡಿ ದೇವಾಲಯದಲ್ಲಿ ಪೂಜೆ ಸಲ್ಲಿಸಲು ಅವರಿಗೆ ವಿಶೇಷ ಅನುಮತಿ ನೀಡಿದನಲ್ಲದೆ ಎರಡು ಕುದುರೆಗಳ, ಬೆಳ್ಳಿಯ ಗಜಲಾಂಛನ ಹೊಂದಿದ, ರಥವೊಂದನ್ನು ಉಪಯೋಗಿಸುವ ಹಕ್ಕನ್ನು ಕೊಟ್ಟನು.[30] ಬದಲಿಗೆ, ಅಠಗಡದ ಜಗನ್ನಾಥನು ಪುರಿಯ ದೇವಾಲಯದ ಅಮೃತಮನೋಹಿ ಸೇವೆಗೆಂದು ಗ್ರಾಮವೊಂದನ್ನು ದತ್ತಿ ಬಿಟ್ಟನು.[31]

1741ರಲ್ಲಿ ದೇವಾಲಯದ ಪರಿಚ್ಛಾಗಳಿಗೆ ವೀರಕೇಸರಿಯು ಛಾಮೂ ಛಿಠಾಲುವೊಂದನ್ನು ಕಳುಹಿಸಿದ್ದನು. ಇದರಲ್ಲಿ ರಥಯಾತ್ರೆಯಲ್ಲಿ ತೇರುಗಳನ್ನು ಎಳೆಯಲುಬೇಕಾದ ಹಗ್ಗವನ್ನು ಸರಬರಾಜು ಮಾಡುವ ಅಧಿಕಾರವನ್ನು ರಾಣಪುರದ ದೊರೆಗೆ ನೀಡಲಾಗಿರುವ ಸಂಗತಿ ಉಲ್ಲೇಖ ಪಡೆದಿದೆ. ಇದಕ್ಕೆ ಪ್ರತಿಫಲವಾಗಿ ರಾಣಪುರದ ದೊರೆ ದೇವಾಲಯಕ್ಕೆ ಬಂದಾಗ ಅವನಿಗೆ ವಿಧಿವತ್ತಾಗಿ ಸೀರೆ, ಮಹಾಪ್ರಸಾದಗಳನ್ನು ನೀಡಬೇಕೆಂದು ಆದೇಶಿಸಲಾಗಿದೆ.[32] ಇದೇ ರೀತಿ ಬಾಂಕಿಯ ದೊರೆಗೆ ರಾತ್ರಿಹೊತ್ತಲ್ಲಿ ಜಗನ್ನಾಥನ ದರ್ಶನ ಪಡೆಯುವ ವಿಶೇಷ ಅನುಮತಿ ನೀಡಲಾಯಿತು.[33] ರಥಯಾತ್ರೆಯಲ್ಲಿ

ರಥಗಳನ್ನು ನಿರ್ಮಿಸುವ ಕಟ್ಟಿಗೆ ಸರಬರಾಜು ಮಾಡುವ ಹಕ್ಕು ದಾಸ್‌ಪಲ್ಲಾದ ದೊರೆಯದಾಗಿತ್ತು.[34] ಹೀಗೆ ಗಡಜಾತರಿಗೆ ಪ್ರತ್ಯೇಕ ಸೌಕರ್ಯಗಳನ್ನು ಒದಗಿಸಿಕೊಡುವ ಮೂಲಕ ಗಜಪತಿಗಳು ಜಗಪತಿಯ ಆದ್ಯಸೇವಕ ಎಂಬ ತಮ್ಮ ಸ್ಥಾನವನ್ನು ಬಲಪಡಿಸಿಕೊಳ್ಳಲು ಹವಣಿಸಿದರು.

ಗಜಪತಿಯ ಪ್ರತಿದ್ವಂದ್ವಿಗಳಾದ ಅರಸರಿಗೆ ಜಗನ್ನಾಥನನ್ನು ಪೋಷಿಸುವ ಮೂಲಕ ವೈರಿಯ ಶಕ್ತಿಯನ್ನು ನಿಯಂತ್ರಿಸುವುದು ಸಾಧ್ಯವೆಂದು ತೋರಿಸಬಹುದಾದ ಸಾಧ್ಯತೆಯೂ ಇದೆ. ಇದಕ್ಕೆ ಉತ್ತಮ ಉದಾಹರಣೆ ಕಿಯೋಂಝರ್‌ನ ದೊರೆ ಕೈಗೊಂಡ ಚಟುವಟಿಕೆಗಳು. ಕಿಯೋಂಝರ್‌ನಲ್ಲಿ ಜಗನ್ನಾಥನ ದೇವಾಲಯವೊಂದಿತ್ತು. ಈ ದೇವಾಲಯದಲ್ಲಿ ರಥಯಾತ್ರೆಯೂ ನಡೆದಿತ್ತು. ಕಿಯೋಂಝರ್ ದೊರೆಯು ತನ್ನ ಪ್ರಾಂತ್ಯದ ಭೂಯಿಯಾನ್ ಹಾಗೂ ಜುಹಾಂಗ್ ಸಮುದಾಯದವರಿಗೆ ಹಗ್ಗ ನಿರ್ಮಿಸಿ ರಥಗಳನ್ನು ಎಳೆಯುವ ಅಧಿಕಾರ ಕಲ್ಪಿಸಿಕೊಟ್ಟನೆಂದು ಹಸ್ತಪ್ರತಿಯೊಂದು ತಿಳಿಸುತ್ತದೆ.[35] "ಹರಿಗೋಳಾ" ಎಂದು ಕೂಗುತ್ತಾ ಬರುವ ಈ ಸಮುದಾಯದವರಿಗೆ ದೇವಾಲಯದ ವತಿಯಿಂದ ಸೀರೆಯನ್ನೂ ಹಣವನ್ನೂ ಉಡುಗೊರೆಯಾಗಿ ನೀಡಲಾಗುತ್ತಿತ್ತು. ಬದಲಿಗೆ, ಈ ಸಮುದಾಯದವರು ತಾವು ಪಡೆದ ದತ್ತಿ ನೆಲದ ಮೇಲೆ ಪಾಲುಕ ಎಂಬ ತೆರಿಗೆಯೊಂದನ್ನು ಸಲ್ಲಿಸಬೇಕಿತ್ತು.[36]

ವೀರಕೇಸರಿಯ ಕಾಲದಲ್ಲಿ ನಾಗ್ಪುರ್‌ನ ಮರಾಠ ಅರಸು ರಘುಜೀ ಬೋಸ್ಲಾ ಹಾಗೂ ಬಂಗಾಳದ ದಿವಾನ್ ಅಲೀವರ್ಧೀ ಖಾನ್‌ಗೂ ಸಂಘರ್ಷ ತೀವ್ರಗೊಂಡು 1751ರಲ್ಲಿ ಅಲೀವರ್ಧೀ ಖಾನ್ ಒಡಿಶ್ಶಾ ಪ್ರಾಂತ್ಯವನ್ನು ಮರಾಠರಿಗೆ ಬಿಟ್ಟುಕೊಡಬೇಕಾಯಿತು. 1759ರಲ್ಲಿ ಸುಬಹ್‌ದಾರ್ ಆದ ಶಿವಭಟ್ಟ ಸಾತೆಯ ಕಾಲದಲ್ಲಿ ಗಜಪತಿಗಳ ಅಧಿಕಾರಕ್ಕೆ ತೀವ್ರ ಧಕ್ಕೆಯುಂಟಾಯಿತು. ಪಾರ್ಲಖೇಮುಂಡಿಯ ಜಗನ್ನಾಥ ನಾರಾಯಣನು ಖುರ್ದಾ ಪ್ರಾಂತ್ಯವನ್ನು ಆಕ್ರಮಿಸಿದಾಗ ವೀರಕೇಸರಿಗೆ ನೆರವು ನೀಡಿದ ಶಿವಭಟ್ಟನು ಈ ನೆರವಿಗೆಂದು ವೀರಕೇಸರಿಯ ಮೇಲೆ ಒಂದು ಲಕ್ಷ ರೂಪಾಯಿಗಳ ಕಪ್ಪ ವಿಧಿಸಿದನು. ಅದನ್ನು ನೀಡಲು ವೀರಕೇಸರಿಯು ವಿಫಲನಾದಾಗ ಅವನ ಕೈಯಿಂದ ಶಿವಭಟ್ಟನು ಲೆಂಬಾಯಿ, ರಹಾಂಗ್ ಪರಗಣಾಗಳನ್ನು ಕಸಿದುಕೊಂಡನು. ಅಲ್ಲದೆ, ದೇವಾಲಯವನ್ನು ತನ್ನ ಅಧೀನಕ್ಕೆ ತಂದುಕೊಂಡು ಹದಿನಾಲ್ಕು ಗಡಜಾತ ದೊರೆಗಳನ್ನು ಖುರ್ಧಾದ ನಿಯಂತ್ರಣದಿಂದ ಮುಕ್ತ ಪಡಿಸಿದವು.[37] ಇದರೊಂದಿಗೆ ಗಜಪತಿಗಳ ಆರ್ಥಿಕ, ಆಡಳಿತಾತ್ಮಕ ಅಧಿಕಾರಗಳೆಲ್ಲವು ನಾಮಾವಶೇಷವಾದವು. ಪುರಿದೇವಾಲಯದೊಂದಿಗಿನ ಅವನ ಸಂಬಂಧವು ಕೇವಲ ಧಾರ್ಮಿಕ ಸ್ಥಿತಿಗತಿಗಳಿಗೆ ಸೀಮಿತಗೊಂಡಿತ್ತು. ಗಜಪತಿಗಳ ರಾಜಾಧಿಕಾರವು ತಲೆಯೆತ್ತಲಾಗದಂತೆ ಕುಸಿದು ಹೋಯಿತು.

ಕೋಣಾರ್ಕ್‌ನ ಸೂರ್ಯ ಮಂದಿರದಲ್ಲಿದ್ದ ಅರುಣಸ್ಥಂಭವನ್ನು ತಂದು ಶ್ರೀಮಂದಿರದ ಸಿಂಹದ್ವಾರದಲ್ಲಿ ನಿಲ್ಲಿಸಿದ್ದು ಮರಾಠರ ಪ್ರಮುಖ ಸಾಧನೆಗಳಲ್ಲಿ ಒಂದಾಗಿದೆ.

**(ಮುಂದುವರೆಯುವುದು)**

ಅಡಿಟಿಪ್ಪಣಿಗಳು

1. Eschmann, Kulke & Tripathi, ಪೂರ್ವೋಕ್ತ, ಪುಟ:330ರಲ್ಲಿನ ಚರ್ಚೆ ನೋಡಿ.
2. ಇಲ್ಲೇ.
3. ಇಲ್ಲೇ.

4. ಇಲ್ಲೇ.
5. ಇಲ್ಲೇ.
6. ಇಲ್ಲೇ, ಪುಟ:331.
7. ಇಲ್ಲೇ.
8. ಇಲ್ಲೇ, ಪುಟ:332.
9. ಇಲ್ಲೇ.
10. ಇಲ್ಲೇ.
11. ಇಲ್ಲೇ.
12. ಅದೇ ಕಾಲದಲ್ಲಿ ತಮಿಳುನಾಡಿನ ನಾಯಕ ದೊರೆಗಳಲ್ಲಿ ಕಂಡುಬಂದ ಸಮಾನಾದ ವಿದ್ಯಮಾನವನ್ನು ವೆಲ್‌ಚೇರು ನಾರಾಯಣ ರಾವ್, ಡೇವಿಡ್ ಶುಲ್ಮನ್ ಹಾಗೂ ಸಂಜಯ್ ಸುಬ್ರಹ್ಮಣ್ಯಂ ದಿವ್ಯ ಪ್ರಭುತ್ವದ ಅಭಿವ್ಯಕ್ತಿ ಎಂದು ವಿವೇಚಿಸಿದ್ದಾರೆ. ನೋಡಿ, Velcheru Narayana Rao, David Shulman & Sanjay Subrahmanyam. *Symbols of Substance : Court and State in Nayaka - Period Tamilnadu,* Oxford University Press, New Delhi, 1992.
13. Mubayi, ಪೂರ್ವೋಕ್ತ; ಪು.:112.
14. ಇಲ್ಲೆ, ಪುಟ:110–111.
15. ಇಲ್ಲೇ. ಪುಟ:145.
16. ಇಲ್ಲೇ, ಪುಟ:145–146.
17. ಬೌರೇನ ಹೇಳಿಕೆಯನ್ನು ಮುಬಾಯಿ ವಿಮರ್ಶಿಸಿದ್ದಾರೆ. ನೋಡಿ, ಇಲ್ಲೇ, ಪುಟ:146–149.
18. ಇಲ್ಲೇ, ಪುಟ:143.
19. ಇಲ್ಲೇ, ಪುಟ:139.
20. Eschmann, Kulke & Tripathi, ಪೂರ್ವೋಕ್ತ,, ಪು:333.
21. ಇಲ್ಲೇ, ಟಿಪ್ಪಣಿ– 64.
22. ಇಲ್ಲೆ, ಪುಟ:334.
23. ಇಲ್ಲೆ.
24. ಇಲ್ಲೆ.
25. ಇಲ್ಲೇ, ಪುಟ:335.
26. ಇಲ್ಲೇ, ಪುಟ:339.
27. ಇಲ್ಲೇ, ಪುಟ:339–340.
28. ಇಲ್ಲೇ. ಪುಟ: 336–337.
29. ಇಲ್ಲೇ. ಪುಟ:340, ಟಿಪ್ಪಣಿ–97.
30. ಇಲ್ಲೇ, ಪುಟ:340–341.
31. ಇಲ್ಲೆ.
32. Mubayi, ಪೂರ್ವೋಕ್ತ, ಪುಟ:57.
33. ಇಲ್ಲೇ, ಪು:63.
34. ಇಲ್ಲೇ.
35. ಇಲ್ಲೇ, ಪು:63–64.
36. ಇಲ್ಲೇ.
37. Eschmann, Kulke & Tripathi, ಪೂರ್ವೋಕ್ತ, ಪುಟ:338.

■

# ಹಂಪೆಯ ಅಶ್ವಪರೀಕ್ಷೆಯ ಅಪರೂಪದ ನಿರೂಪಣಾತ್ಮಕ ಉಬ್ಬುಶಿಲ್ಪಗಳು

▫ ಎಸ್. ನಾಗರಾಜಪ್ಪ
ಸಹಾಯಕ ಶಾಸನತಜ್ಞರು,
ಶಾಸನಶಾಸ್ತ್ರ ನಿರ್ದೇಶಕರ ಕಛೇರಿ,
ಭಾರತೀಯ ಪುರಾತತ್ವ ಸರ್ವೇಕ್ಷಣ
ಇಲಾಖೆ, ಪುರಾತತ್ವ ಭವನ,
ಹೆಬ್ಬಾಳ 2ನೇ ಹಂತ,
ಮೈಸೂರು–17.

ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಹಂಪೆ ಮಧ್ಯಕಾಲೀನ ಯುಗದ ಪ್ರಮುಖ ವ್ಯಾಪಾರ ಕೇಂದ್ರ. ಆನೆಗೊಂದಿಯಿಂದ ಹಂಪೆಗೆ ರಾಜಧಾನಿ ಬದಲಾವಣೆಯಾದ ನಂತರ ಹಂಪೆ ಕ್ಷಿಪ್ರಗತಿಯಲ್ಲಿ ವ್ಯಾಪಾರಿ ಕೇಂದ್ರವಾಗಿ ಬೆಳೆದದ್ದು ಇತಿಹಾಸದಿಂದ ತಿಳಿಯುವ ವಿಷಯ. ಹಂಪೆಯು ಶಾಸನಗಳಲ್ಲಿ ಪಂಪಾಕ್ಷೇತ್ರ, ವಿರೂಪಾಕ್ಷಪುರ, ಭಾಸ್ಕರಕ್ಷೇತ್ರ, ವಿದ್ಯಾನಗರ, ವಿಜಯನಗರಪಟ್ಟಣ ಎಂಬ ವಿವಿಧ ಅಭಿದಾನಗಳಿಂದ ಉಲ್ಲೇಖವಾಗಿದೆ. ಸಂಗಮ, ಸಾಳುವ ಮತ್ತು ತುಳುವ ಮನೆತನಗಳಿಗೆ ಕ್ರಮವಾಗಿ ಇದು ರಾಜಧಾನಿಯಾಗಿತ್ತು. ದೇಶ ವಿದೇಶಗಳ ಅನೇಕ ವರ್ತಕರು ತಮ್ಮ ವಸ್ತುಗಳನ್ನು ಮಾರಲು ಹಂಪೆಗೆ ಬರುತ್ತಿದ್ದರು. ಅದರಲ್ಲಿ ಅಶ್ವಗಳ ವರ್ತಕರು ಬಹುಮುಖ್ಯ. ವಿಜಯನಗರದ ಸೈನ್ಯಕ್ಕೆ ಅಗತ್ಯವಾಗಿದ್ದ ಕುದುರೆಗಳನ್ನು ಅರಸರು ಅರೇಬಿಯಾ, ಹೊರ್ಮುಜ್‌ಗಳಿಂದ ತರಿಸಿಕೊಳ್ಳುತ್ತಿದ್ದರು. ಹಾಗಾಗಿ, ಅವರ ಅನೇಕ ಶಿಲ್ಪಗಳು ಹಂಪಿ ಪರಿಸರದಲ್ಲಿವೆ.

ವಿಜಯನಗರದ ಉಪನಗರವಾಗಿದ್ದ ವಿಠ್ಠಲಾಪುರ ದಲ್ಲಿರುವ ವಿಠ್ಠಲ ದೇವಾಲಯದ ಮಹಾಮಂಟಪದ ಅಧಿಷ್ಠಾನದ ಜಗತಿ ಭಾಗದಲ್ಲಿ ವಿದೇಶಿ ಅಶ್ವಗಳನ್ನು ಪರೀಕ್ಷೆ ಮಾಡುತ್ತಿರುವ ಶಿಲ್ಪಗಳನ್ನು ಕಂಡರಿಸಲಾಗಿದೆ. ಅವುಗಳನ್ನು ಕುಲಂಕುಷವಾಗಿ ಪರಿಶೀಲಿಸಿ ವಿಜಯನಗರ ಕಾಲದಲ್ಲಿ ಅಶ್ವಗಳ ಆಮದು, ಅವುಗಳ ಪರೀಕ್ಷೆ ಮತ್ತು ಅವುಗಳ ಆಮದಿಗೆ ನೀಡಿದ್ದ ಮಹತ್ವವನ್ನು ಕುರಿತು ಚರ್ಚಿಸುವ ಪ್ರಯತ್ನವನ್ನು ಪ್ರಸ್ತುತ ಲೇಖನದಲ್ಲಿ ಮಾಡಲಾಗಿದೆ.

ಅಶ್ವ ಎಂಬ ಸಂಸ್ಕೃತ ಶಬ್ದಕ್ಕೆ ಹಯ, ತುರಗ, ಕುದುರೆ ಎಂಬಿತ್ಯಾದಿ ಹೆಸರುಗಳನ್ನು ಪರ್ಯಾಯವಾಗಿ ಬಳಸಲಾಗುತ್ತದೆ. ಕುದುರೆ ಯುದ್ಧಕ್ಕೆ ಬೇಕಾದ ಮುಖ್ಯ ಪ್ರಾಣಿ. ಕ್ಷಣಾರ್ಧದಲ್ಲಿ ದೂರವನ್ನು ಕ್ರಮಿಸಿ, ಶತೃಪಾಳಯದ ಮೇಲೆ ವೇಗವಾಗಿ ಧಾಳಿ ನಡೆಸಿ, ಶತೃಗಳನ್ನು ಘಾಸಿಗೊಳಿಸುವುದರಲ್ಲಿ ಕುದುರೆಗಳು ಪ್ರಮುಖ ಪಾತ್ರ ವಹಿಸುತ್ತಿದ್ದವು. ಹಾಗಾಗಿ ಆರಂಭದ ಕಾಲದಿಂದಲೂ ಕುದುರೆಗಳನ್ನು ಸೈನ್ಯಕ್ಕೆ ಬಳಸುತ್ತಿದ್ದುದು ಸ್ಪಷ್ಟ.

ಭಾರತೀಯ ಕುದುರೆಗಳು ಯುದ್ಧಕ್ಕೆ ಉತ್ತಮವಾದವುಗಳಲ್ಲ ಎಂಬ ಅಭಿಪ್ರಾಯವೊಂದು ಪ್ರಚಲಿತದಲ್ಲಿದೆ. ಮಧ್ಯಕಾಲೀನ ಯುಗದಲ್ಲಿ ಭಾರತಕ್ಕೆ ಆಮದಾಗುತ್ತಿದ್ದ ಅಶ್ವಗಳನ್ನು ಮತ್ತು ಅದರ ವ್ಯಾಪಾರವನ್ನು ಗಮನಿಸಿದರೆ ಇದು ನಿಜವೆನಿಸುತ್ತದೆ. ವಿದೇಶಿ ಪ್ರವಾಸಿಗ ಸೀಜರ್ ಫೆಡರಿಕ್‌ನು ವಿಜಯನಗರದ ಕುದುರೆಗಳನ್ನು ಕುರಿತು "ಬಿಜೇನಗರದ ಕುದುರೆಗಳು ಅತಿ ಸಣ್ಣ. ಈ ಕಾರಣ ಅರೇಬಿಯಾದ ಕುದುರೆಗಳಿಗೆ ಒಳ್ಳೆ ಗಿರಾಕಿ" ಎಂದಿದ್ದಾನೆ.[1] ಇವನ ಹೇಳಿಕೆ ನಿಜವಾದದ್ದು. ಏಕೆಂದರೆ ಭಾರತೀಯ ಅಶ್ವಗಳು ಅರಬ್ ಅಶ್ವಗಳಂತೆ ಗಟ್ಟಿಮುಟ್ಟಾದ ಶರೀರ ಹೊಂದಿರುತ್ತಿರಲಿಲ್ಲ. ಅಲ್ಲದೆ ಇಲ್ಲಿನ ಹವಾಮಾನ ಸಹ ದೇಶೀಯ ತಳಿಗಳ ಅಭಿವೃದ್ಧಿಗೆ ಪೂರಕವಾಗಿರಲಿಲ್ಲ. ಒಂದುವೇಳೆ ದೇಶೀಯ ತಳಿಗಳನ್ನು ಸೈನ್ಯಕ್ಕೆ ಬಳಸಿದರೂ, ಇವು ಇಲ್ಲಿನ ವಾತಾವರಣದಲ್ಲಿನ ವ್ಯತ್ಯಾಸದಿಂದಾಗಿ ಹೆಚ್ಚುಕಾಲ ಬದುಕುವ ಸಾಧ್ಯತೆ ಕಡಿಮೆ. ಈ ಕಾರಣದಿಂದಾಗಿ ಅಶ್ವಗಳನ್ನು ವಿದೇಶಗಳಿಂದ ತರಿಸಿಕೊಳ್ಳುತ್ತಿದ್ದರು.

ಅರೇಬಿಯಾದ ಕುದುರೆಗಳು ಪ್ರಪಂಚದಲ್ಲಿ ಅತ್ಯಂತ ಪ್ರಸಿದ್ಧಿ. ಅಂತರಾಷ್ಟ್ರೀಯ ಮಟ್ಟದಲ್ಲಿ ಇವುಗಳಿಗೆ ಉತ್ತಮ ಬೇಡಿಕೆ ಇದ್ದುದು ಸ್ಪಷ್ಟ. ಅರೇಬಿಯಾದ ಕುದುರೆಗಳು ಭಾರತೀಯ ಕುದುರೆಗಳಿಗಿಂತ ಉತ್ತಮ ತಳಿಯವು. ಇವುಗಳು ಬೆಣೆಯಾಕಾರದ ತಲೆ, ಅಗಲವಾದ ಹಣೆ, ದೊಡ್ಡ ಕಣ್ಣು ಮತ್ತು ಮೂಗಿನ ಹೊಳ್ಳೆಗಳನ್ನು ಹೊಂದಿರುತ್ತವೆ. ಉದ್ದನೆಯ ಸ್ವಲ್ಪ ಬಾಗಿರುವ ಕತ್ತು, ಕೋನೀಯ ರೀತಿಯಲ್ಲಿರುವ ಬೆನ್ನು ಮತ್ತು ಉದ್ದನೆಯ ಬಾಲವನ್ನು ಹೊಂದಿರುತ್ತವೆ. ಶಕ್ತಿಯುತವಾದ ಮಾಂಸಖಂಡಗಳಿಂದ ಕೂಡಿರುವ ಇವುಗಳ ಮೂಳೆಗಳು ಹೆಚ್ಚು ಬಲಶಾಲಿ. ಅಲ್ಲದೆ ಇವುಗಳ ಗೊರಸುಗಳು ಸಹ ದೊಡ್ಡದಾಗಿರುತ್ತವೆ. ಚುರುಕುತನದಿಂದ ಕೂಡಿದ ಈ ಅಶ್ವಗಳು ಕ್ಷಣಾರ್ಧದಲ್ಲಿ ನಿರ್ದಿಷ್ಟ ದೂರವನ್ನು ತಲುಪುತ್ತಿದ್ದವು. ಯುದ್ಧಗಳಲ್ಲಿ ಅತಿ ವೇಗವಾಗಿ ಮುನ್ನುಗ್ಗಿ, ಶತೃಗಳನ್ನು ಧ್ವಂಸಗೊಳಿಸಲು ಅಶ್ವಗಳು ಅಗತ್ಯವಾಗಿದ್ದವು. ಮತ್ತು ಇಂತಹ ಅಶ್ವಗಳು ರಾಜನ ಸೈನ್ಯದಲ್ಲಿ ಇದ್ದರೆ ಅವನ ಸೈನ್ಯ ಸಧೃಡವಾಗಿರುತ್ತಿತ್ತು. ಹಾಗಾಗಿ, ಯುದ್ಧಗಳಲ್ಲಿ ಅಶ್ವದಳವು ವಹಿಸುತ್ತಿದ್ದ ಪಾತ್ರ ಅಗಣಿತ. ದಕ್ಷಿಣ ಭಾರತದಲ್ಲಿ ಅರಬ್ ಅಶ್ವಗಳಿಗೆ ಬೇಡಿಕೆ ಹೆಚ್ಚಾಗಲು ಇವು ಬಹು ಮುಖ್ಯ ಕಾರಣಗಳು ಎನ್ನಬಹುದು.

ಅಶ್ವಗಳು ಮತ್ತು ಅವುಗಳ ಮಹತ್ವವನ್ನು ಕುರಿತು ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ ಮತ್ತು ಕಲ್ಯಾಣ ಚಾಲುಕ್ಯ ಚಕ್ರವರ್ತಿ ಮುಮ್ಮಡಿ ಸೋಮೇಶ್ವರನು ತನ್ನ ಮಾನಸೋಲ್ಲಾಸ ಕೃತಿಗಳಲ್ಲಿ ವಿವರಿಸಿದ್ದಾರೆ. ಕೌಟಿಲ್ಯ ತನ್ನ ಅರ್ಥಶಾಸ್ತ್ರ ಕೃತಿಯಲ್ಲಿ "ಪಳಗಿದ ಯುದ್ಧಕ್ಕೆ ಯೋಗ್ಯವಾದ ಕುದುರೆಗಳಲ್ಲಿ ಕಾಂಬೋಜ, ಸಿಂಧೂದೇಶ, ಆರಟ್ಟ, ವಾನಯ ದೇಶಗಳಲ್ಲಿ ಹುಟ್ಟಿದವುಗಳು ಉತ್ತಮವಾದವು" ಎಂದು ತಿಳಿಸುತ್ತಾನೆ.[2] ಕಲ್ಯಾಣ ಚಾಲುಕ್ಯ ಚಕ್ರವರ್ತಿ ಮುಮ್ಮಡಿ ಸೋಮೇಶ್ವರನು ಯುದ್ಧದ ಅಶ್ವಗಳ ಬಗ್ಗೆ "ಯವನದೇಶ, ಕಾಂಬೋಜದಲ್ಲಿ

ಹುಟ್ಟಿದ ಚೆನ್ನಾಗಿ ಶಿಕ್ಷಣ ಹೊಂದಿರುವ ಕುದುರೆಗಳು ಹೆಚ್ಚಾಗಿದ್ದರೆ ಅದು ಉತ್ತಮ ಸೈನ್ಯವಾಗುತ್ತದೆ. ಸೈನ್ಯದಲ್ಲಿ ಒಳ್ಳೆಯ ಕುದುರೆಗಳಿದ್ದರೆ ದೂರದಲ್ಲಿರುವ ವೈರಿಗಳನ್ನು ಕೂಡ ಗೆಲ್ಲಬಹುದು. ಈ ಕುದುರೆಗಳಿಂದ ಕೀರ್ತಿ ದೊರೆಯುತ್ತದೆಯಲ್ಲದೆ ರಾಜ್ಯ ಚೆನ್ನಾಗಿರುತ್ತದೆ" ಎಂದು ತನ್ನ ಅಭಿಲಾಷಿತಾರ್ಥ ಚಿಂತಾಮಣಿ ಅಥವಾ ಮಾನಸೋಲ್ಲಾಸ ಕೃತಿಯಲ್ಲಿ ಹೇಳಿದ್ದಾನೆ.[3] ಈ ಮೇಲಿನ ಕೃತಿಗಳು ಸಹ ವಿದೇಶಿ ಅಶ್ವಗಳು ಸೈನ್ಯಕ್ಕೆ ಬಹು ಉತ್ತಮವಾದವುಗಳೆಂದು ಉಲ್ಲೇಖಿಸುತ್ತವೆ. ಪ್ರಸ್ತುತ ಅಶ್ವಪರೀಕ್ಷೆಯ ಶಿಲ್ಪಗಳನ್ನು ವಿವರಿಸುವ ಪೂರ್ವದಲ್ಲಿ ವಿಜಯನಗರಕ್ಕೆ ಆಮದಾಗುತ್ತಿದ್ದ ಕುದುರೆ ವ್ಯಾಪಾರದ ಸ್ಥೂಲನೋಟ ಇಲ್ಲಿ ಅಪ್ರಸ್ತುತ ಎನಿಸುವುದಿಲ್ಲ.

ಭಾರತಕ್ಕೆ ವಿದೇಶಗಳಿಂದ ಕುದುರೆಗಳನ್ನು ತರಿಸಿಕೊಳ್ಳುವುದು ಪ್ರಾಚೀನ ಕಾಲದಿಂದಲೂ ಇತ್ತಾದರೂ, ಈ ಚಟುವಟಿಕೆ ಪ್ರಬಲಗೊಂಡದ್ದು ಚೋಳರ ಕಾಲದಲ್ಲಿ ಎನ್ನಬಹುದು. ಚೋಳ ಅರಸರು ತಮ್ಮ ಸೈನ್ಯಕ್ಕೆ ಅಗತ್ಯವಾಗಿದ್ದ ವಿದೇಶಿ ಕುದುರೆಗಳನ್ನು ಕುದಿರೈಚೆಟ್ಟಿ ಎನ್ನುವ ದೇಶೀಯ ವರ್ತಕ ಸಮುದಾಯದ ಮೂಲಕ ತರಿಸಿಕೊಳ್ಳುತ್ತಿದ್ದರು. ಚೋಳರ ಶಾಸನಗಳಲ್ಲಿ ಅಶ್ವ ವರ್ತಕರಾದ ಕುದಿರೈಚೆಟ್ಟಿಗಳ ನಿರಂತರ ಉಲ್ಲೇಖಗಳಿದ್ದು, ಅವರು ಅರೇಬಿಯಾ ಮತ್ತು ಪೆಗುಗಳಿಂದ ಅಶ್ವಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು ಮತ್ತು ಚೋಳ ಸಾಮ್ರಾಜ್ಯದ ಅರಸರಿಗೆ ಮತ್ತು ಶ್ರೀಮಂತರಿಗೆ ಅವುಗಳನ್ನು ಮಾರಾಟ ಮಾಡುತ್ತಿದ್ದರು.[4] ಅರಬ್ಬರು ಸಮುದ್ರ ವ್ಯಾಪಾರದ ಮೇಲೆ ಹಿಡಿತ ಸಾಧಿಸಿದ್ದರ ಪರಿಣಾಮವಾಗಿ ಕುದುರೆ ವ್ಯಾಪಾರವು ಅರಬ್ಬರ ವಶವಾಯಿತು. ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿಯ ಏರಿಳಿತಗಳು ಸಹ ನಂತರ ಕಾಲದಲ್ಲಿ ಅಶ್ವಗಳ ಬೇಡಿಕೆಯನ್ನು ಹೆಚ್ಚಿಸಿದವು. ದಕ್ಷಿಣ ಭಾರತಕ್ಕೆ ದೆಹಲಿ ಸುಲ್ತಾನತ್ತಿನ ವಿಸ್ತರಣೆ, ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳ ಸ್ಥಾಪನೆಯು ದಕ್ಷಿಣ ಭಾರತದ ಯುದ್ಧಕ್ರಮವನ್ನು ಬದಲಾಯಿಸಿದವಲ್ಲದೆ, ಅವರ ಸೈನ್ಯಗಳು ಸಂಪೂರ್ಣವಾಗಿ ಅಶ್ವದಳವನ್ನು ಅವಲಂಬಿಸುವಂತಾಯಿತು.[5] ಎರಡೂ ಸಾಮ್ರಾಜ್ಯಗಳ ನಡುವಿನ ನಿರಂತರ ಹೋರಾಟಗಳು ವಿದೇಶಿ ಕುದುರೆಗಳ ಬೇಡಿಕೆಯನ್ನು ಹೆಚ್ಚಿಸುವುದರೊಡನೆ ವಿದೇಶಿಗರಿಗೆ ಕುದುರೆ ವ್ಯಾಪಾರಕ್ಕೆ ಅಗತ್ಯವಾಗಿದ್ದ ವಾತಾವರಣವನ್ನು ಸೃಷ್ಟಿಸಿದವು. ಇದರಿಂದಾಗಿ ಎರಡೂ ಸಾಮ್ರಾಜ್ಯಗಳು ತಮ್ಮ ತಮ್ಮ ಸೈನ್ಯದ ಸಂವರ್ಧನೆಗಾಗಿ ಅದೆನ್, ಹೊರ್ಮುಜ್, ಅರೇಬಿಯಾ ಮತ್ತು ಪರ್ಷಿಯಾಗಳಿಂದ ಅಶ್ವಗಳನ್ನು ತರಿಸಿಕೊಳ್ಳಲು ಮುಂದಾದವು. ಹಾಗಾಗಿ, ವಿದೇಶಿ ಕುದುರೆಗಳ ವ್ಯಾಪಾರದಲ್ಲಿ ಗಣನೀಯ ಹೆಚ್ಚಳ ಕಂಡಿದ್ದು ಮಾತ್ರ ಸತ್ಯ.

ಪೋರ್ಚುಗೀಸರು ಸಮುದ್ರ ವ್ಯಾಪಾರದತ್ತ ಗಮನ ಹರಿಸಿ, ಭಾರತಕ್ಕೆ ಹೊಸ ಸಮುದ್ರ ವ್ಯಾಪಾರ ಮಾರ್ಗ ಕಂಡುಕೊಂಡ ನಂತರ ಅರಬ್, ಪರ್ಷಿಯಾದಿಂದ ಭಾರತಕ್ಕೆ ಸರಬರಾಜಾಗುತ್ತಿದ್ದ ಅಶ್ವ ವ್ಯಾಪಾರದ ಮೇಲೆ ಕ್ರಮೇಣ ಹಿಡಿತ ಸಾಧಿಸ ತೊಡಗಿದರು. 1503ರಲ್ಲಿ ಕೊಚ್ಚಿನ್‌ನಲ್ಲಿ ಕೋಟೆ ಕಟ್ಟಿದ ನಂತರ, 1510ರಲ್ಲಿ ಗೋವಾವನ್ನು, 1515ರಲ್ಲಿ ಹೊರ್ಮುಜ್‌ಅನ್ನು ಗೆದ್ದರು. ಈ ವಿಜಯಗಳಿಂದ ಪೋರ್ಚುಗೀಸರು ಸಮುದ್ರ ವ್ಯಾಪಾರದ ಮೇಲೆ ಹಿಡಿತ ಸಾಧಿಸಿದರು. ಬಿಜಾಪುರದ ಆದಿಲ್‌ಷಾಹಿಯಿಂದ ಗೋವಾವನ್ನು ಗೆಲ್ಲಲು ಪೋರ್ಚುಗೀಸ್ ಗವರ್ನರನಿಗೆ ರಾಯನು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ

ಸಹಕರಿಸಿದ್ದನು.[6] ಇವರಿಂದಾಗಿ ಭಾರತಕ್ಕೆ ಸರಬರಾಜಾಗುತ್ತಿದ್ದ ಕುದುರೆ ವ್ಯಾಪಾರದಲ್ಲಿ ಸಂಪೂರ್ಣ ಏಕಸ್ವಾಮ್ಯತೆಯನ್ನು ಪೋರ್ಚುಗೀಸರು ಪಡೆದರು. ನಂತರದಲ್ಲಿ ವಿಜಯನಗರ ಅರಸರೊಡನೆ ಗಳಿಸಿಕೊಂಡ ಸೌಹಾರ್ದಯುತ ಸಂಬಂಧದ ಪ್ರತಿಫಲವಾಗಿ ತಾವು ತಂದ ಎಲ್ಲಾ ಕುದುರೆಗಳನ್ನು ಅವರಿಗೆ ಮಾರಾಟ ಮಾಡತೊಡಗಿದರು. ಕೃಷ್ಣದೇವರಾಯ ಸಹ ಇವರೊಡನೆ ಒಪ್ಪಂದ ಮಾಡಿಕೊಂಡು, ಅವರು ತಂದಿದ್ದ ಎಲ್ಲಾ ಅಶ್ವಗಳನ್ನು ಕೊಂಡುಕೊಳ್ಳತೊಡಗಿದನು. ಇದಕ್ಕೆ ಮುಖ್ಯ ಕಾರಣ ಸೈನ್ಯದ ಬಲವರ್ಧನೆ. ಅಶ್ವಗಳ ಸಹಾಯದಿಂದ ಬೀದರ್‌ನ ಸುಲ್ತಾನನ ವಿರುದ್ಧದ ಯುದ್ಧದಲ್ಲಿ ಗೆದ್ದೆವು ಎಂದು ಸ್ವತಃ ಕೃಷ್ಣದೇವರಾಯನೇ ಹೇಳಿರುವುದು ಕೃಷ್ಣದೇವರಾಯ ಅಶ್ವದಳಕ್ಕೆ ನೀಡಿದ್ದ ಮಹತ್ವವನ್ನು ತೋರುತ್ತದೆ.[7] ಅಚ್ಯುತರಾಯ ಮತ್ತು ಸದಾಶಿವರಾಯರು ಸಹ ವಿದೇಶಿಗರಿಂದ ಅಶ್ವಗಳನ್ನು ಕೊಂಡುಕೊಳ್ಳುವುದನ್ನು ಮುಂದುವರೆಸಿದರು. ಕ್ರಿ.ಶ. 1565ರಲ್ಲಿ ಜರುಗಿದ ತಾಳಿಕೋಟೆ ಕದನದ ನಂತರದಲ್ಲಿ ಕುದುರೆಗಳ ಆಮದಿನಲ್ಲಿ ಗಣನೀಯ ಇಳಿಕೆಯಾಗಿದ್ದುದು ವಾಸ್ತವದ ಸಂಗತಿ. ಹಂಪೆಯ ವಿಠ್ಠಲಾಪುರದಲ್ಲಿನ ವಿಜಯವಿಠ್ಠಲ ದೇವಾಲಯದ ಮುಖಮಂಟಪದ ಅಧಿಷ್ಠಾನದಲ್ಲಿ ವಿದೇಶಿ ಅಶ್ವಗಳನ್ನು ಪರೀಕ್ಷೆ ಮಾಡುತ್ತಿರುವ ಎರಡು ನಿರೂಪಣಾತ್ಮಕ ಉಬ್ಬು ಶಿಲ್ಪಗಳನ್ನು ಕಡೆಯಲಾಗಿದೆ. ಈ ಶಿಲ್ಪಗಳು ಅಧಿಷ್ಠಾನದ ಜಗತಿ ಭಾಗದಲ್ಲಿವೆ. ಇದರಲ್ಲಿ ಅಶ್ವಗಳನ್ನು ಮಾರುತ್ತಿರುವ ವರ್ತಕರು, ಅವುಗಳನ್ನು ಸಲಹುತ್ತಿರುವವರು, ಅಶ್ವಗಳತ್ತ ಕೈ ತೋರಿಸುತ್ತಿರುವ ದೇಶೀಯ ಮತ್ತು ವಿದೇಶೀಯ ವರ್ತಕರು, ರಾಜಪ್ರಮುಖರು ಅಶ್ವಗಳನ್ನು ವೀಕ್ಷಿಸುತ್ತಿರುವ ಮತ್ತು ವರ್ತಕರೊಡನೆ ಸಂಭಾಷಣೆ ನಡೆಸುತ್ತಿರುವ ಶಿಲ್ಪವನ್ನು


(ಚಿತ್ರ-1)

ಕಾಣಬಹುದು. ಚಿತ್ರ-1ರಲ್ಲಿ ರಾಜಪ್ರಮುಖನು ಪೀಠವೊಂದರ ಮೇಲೆ ಕುಳಿತುಕೊಂಡಿದ್ದಾನೆ. ಬಲಗಾಲನ್ನು ನೆಲದ ಮೇಲೆ ಇಟ್ಟಿದ್ದು, ತನ್ನ ಎಡಗಾಲನ್ನು ಬಲಗಾಲ ಮೇಲೆ ಹಾಕಿಕೊಂಡಿದ್ದಾನೆ. ರಾಜಪ್ರಮುಖರನ್ನು ಇದೇರೀತಿ ಆಸಿನರಾಗಿರುವಂತೆ ಇತರ ಶಿಲ್ಪಗಳಲ್ಲಿ ತೋರಲಾಗಿದೆ. ಇವನ ಬಲಗೈ ಸೂಚಿಮುದ್ರೆಯಲ್ಲಿದೆ. ಅಶ್ವದ ಜೊತೆಗೆ ನಿಂತಿರುವ ವರ್ತಕರು ಇವನ ಮುಂಬದಿಯಲ್ಲಿ ನಿಂತುಕೊಂಡಿರುವುದನ್ನು ಶಿಲ್ಪದಲ್ಲಿ ಕಾಣಬಹುದು.

ಇವರಲ್ಲಿ ಇಬ್ಬರು ವರ್ತಕರು ರಾಜಪ್ರಮುಖನೊಡನೆ ಮಾತನಾಡುತ್ತಿರುವಂತೆ ಶಿಲ್ಪ ಭಾಸವಾಗುತ್ತಿದೆ. ಹಾಗಾಗಿ, ಕುಳಿತು ಮಾತಾನಾಡುತ್ತಿರುವ ವ್ಯಕ್ತಿ ಅಶ್ವಪತಿ ಇದ್ದಿರಬಹುದು ಎಂದು ಊಹಿಸಬಹುದು. ವರ್ತಕರು ತಂದಿರುವ ಅಶ್ವಗಳನ್ನು ನೋಡಿ, ಇವನು ಅವರೊಡನೆ ಸಂಭಾಷಣೆ ನಡೆಸುತ್ತಿರುವುದನ್ನು ಶಿಲ್ಪಿ ಇಲ್ಲಿ ಮೂರ್ತರೂಪದಲ್ಲಿ ಕಂಡರಿಸಿದ್ದಾನೆ. ಇವುಗಳೊಡನೆ ಇಲ್ಲಿ ಅಶ್ವವೊಂದಕ್ಕೆ ಆಹಾರವನ್ನು ತಿನ್ನಿಸುತ್ತಿರುವ ಶಿಲ್ಪವನ್ನು ಸಹ ಕಾಣಬಹುಮು. ವಿಠ್ಠಲ ದೇವಾಲಯದ ಮಹಾಮಂಟಪದ ಅಧಿಷ್ಠಾನದಲ್ಲಿ ಅಶ್ವವರ್ತಕರ ಜೊತೆ ಪೋರ್ಚುಗೀಸ್ ಪ್ರಮುಖನೊಬ್ಬನ ಶಿಲ್ಪವಿದೆ. ಈತ ಕೈಯಲ್ಲಿ ಉದ್ದನೆಯ ಕೋಲನ್ನು ಹಿಡಿದು ನಿಂತಿದ್ದಾನೆ. ಪಾದಗಳವರೆಗೆ ಇರುವ ಉದ್ದನೆಯ ನಿಲುವಂಗಿ ಮತ್ತು ತಲೆಗೆ ದುಂಡನೆಯ ಟೊಪ್ಪಿ ಧರಿಸಿದ್ದಾನೆ. ಈತನ ಉದ್ದನೆಯ ಮೀಸೆ, ಚಿಕ್ಕ ತ್ರಿಕೋನಾಕಾರದ ಗಡ್ಡಗಳು ಆಕರ್ಷಕವಾಗಿವೆ. ಇವನು ಪೋರ್ಚುಗೀಸ್ ಕುದುರೆ ವ್ಯಾಪಾರಿಗಳೊಡನೆ ನಿಂತಿದ್ದಾನೆ. ಫಾದರ್ ಹೆರಾಸ್ ಹೇಳುವಂತೆ 'ಇದೊಂದು ಕ್ರೈಸ್ತರ ಕ್ಯಾಥೋಲಿಕ್ ಪಂಥದ ಪಾದ್ರಿಯ ಶಿಲ್ಪ. ಕ್ರಿ.ಶ. 1510ರಲ್ಲಿ ಫ್ರೆ ಲೂಯಿಸ್ ಎಂಬ ಕ್ರೈಸ್ತ ಕ್ಯಾಥೋಲಿಕ್ ಸನ್ಯಾಸಿ ಅಲ್ಬುಕರ್ಕನ ಪ್ರಥಮ ರಾಯಭಾರಿಯಾಗಿ ವಿಜಯನಗರಕ್ಕೆ ಭೇಟಿ ನೀಡಿ, ಒಂದು ವರ್ಷ ಅಲ್ಲಿ ನೆಲೆಸಿದ್ದನು. ನಂತರ ವಿಜಯನಗರ ಮತ್ತು ಗೋವಾ ಅಶ್ವ ವ್ಯಾಪಾರದಿಂದ ಆತಂಕಿತರಾದ ಬಿಜಾಪುರದ ಸುಲ್ತಾನರ ಗುಪ್ತಚರ ಇಲಾಖೆಯಿಂದ ಇವನು ಹತ್ಯೆಗೊಳಗಾದ. ಫ್ರೆ ಲೂಯಿಸ್‌ನು ಕುದುರೆ ವ್ಯಾಪಾರದ ಮಹತ್ತರ ಕಾರ್ಯಕ್ಕಾಗಿ ಹಸುನೀಗಿದನು. ವಿಜಯನಗರ ಮತ್ತು ಪೋರ್ಚುಗೀಸರ ಮೊದಲ ರಾಯಭಾರತ್ವದ ಮತ್ತು ಫ್ರೆ ಲೂಯಿಸ್‌ನ ದುರಂತ ಸಾವಿನ ಸ್ಮರಣಾರ್ಥ ಅವನ ಶಿಲ್ಪವನ್ನು ವಿಠಲಸ್ವಾಮಿ ದೇಗುಲದ ಅಧಿಷ್ಠಾನದಲ್ಲಿ ಕೆತ್ತಲಾಗಿದೆ' ಎಂದಿದ್ದಾರೆ.[8]

ಪ್ರಸ್ತುತ ಅಶ್ವಗಳನ್ನು ಪರೀಕ್ಷೆ ಮಾಡುತ್ತಿರುವ ಶಿಲ್ಪಗಳಲ್ಲಿ ಒಂದು ಪೂರ್ವದಿಕ್ಕಿನಿಂದ ಮಹಾಮಂಟಪವನ್ನು ಪ್ರವೇಶಿಸುವ ಮೆಟ್ಟಿಲುಗಳ ಬಲಬದಿಯಲ್ಲಿದೆ. ಎರಡನೆಯ ಶಿಲ್ಪವನ್ನು ಇದೇ ಅಧಿಷ್ಠಾನದ ದಕ್ಷಿಣ ಬದಿಯಲ್ಲಿ ಕಾಣಬಹುದು. ಇದರಲ್ಲಿ ಮೊದಲನೆಯ ಶಿಲ್ಪವನ್ನು


(ಚಿತ್ರ–2)

(ಚಿತ್ರ-2) ಅತ್ಯಂತ ಸ್ಪಷ್ಟವಾಗಿ ಕಡೆಯಲಾಗಿದೆ. ಮೊದಲನೆಯ ಶಿಲ್ಪದಲ್ಲಿ ಪೋರ್ಚುಗೀಸ್ ಕುದುರೆ ವ್ಯಾಪಾರಿಯೊಬ್ಬ ಅಶ್ವದ ಮೇಲೆ ಕುಳಿತು ಅದರ ಲಗಾಮನ್ನು ಹಿಡಿದುಕೊಂಡಿದ್ದಾನೆ. ಅಶ್ವದ ಮುಂದೆ ನಿಂತಿರುವ ವ್ಯಕ್ತಿಯು ಅದರ ಮುಖವಾಡ ಮತ್ತು ಲಗಾಮನ್ನು ಹಿಡಿದು, ಅದರ ಹಲ್ಲುಗಳನ್ನು ಪರೀಕ್ಷಿಸುತ್ತಿದ್ದಾನೆ. ಇಬ್ಬರು ಸಹ ಅದರ ಲಗಾಮು ಮತ್ತು ಮೂಗುದಾರವನ್ನು ಹಿಡಿದಿರುವುದರಿಂದ ಅಶ್ವವು ಬಹುಶಃ ನೋವನ್ನು ತಾಳಲಾರದೆ ತನ್ನ ಎರಡೂ ಮುಂಗಾಲುಗಳನ್ನು ಮೇಲೆತ್ತಿ ಮುಂದಕ್ಕೆ ಹಾರುತ್ತಿರುವಂತೆ ತೋರಲಾಗಿದೆ. ಅಶ್ವವನ್ನು ಪರೀಕ್ಷಿಸುತ್ತಿರುವ ವ್ಯಕ್ತಿಯು ಉದ್ದನೆಯ ತೋಳುಗಳ ಮೇಲುಡಿಗೆ, ಕೆಳ ಉಡಿಗೆಯಾಗಿ ಪ್ಯಾಂಟು ಹಾಗೂ ತಲೆಗೆ ದುಂಡನೆಯ ತಲೆಯುಡಿಗೆ ಧರಿಸಿರುವುದನ್ನು ಕಾಣಬಹುದು. ಇವನ ಉಡುಗೆಯ ಆಧಾರದಿಂದ ಇವನೊಬ್ಬ ದೇಶೀಯನೆಂದು ಗುರುತಿಸಬಹುದು. ಅಶ್ವಾರೋಹಿಯಾಗಿರುವ ವಿದೇಶಿ ವರ್ತಕ ಧರಿಸಿರುವ ಉದ್ದನೆಯ ತೋಳಿನ ಮೇಲುಡಿಗೆ ಮತ್ತು ಕೆಳ ಉಡುಗೆ-ಪ್ಯಾಂಟು, ತಲೆಗೆ ಧರಿಸಿರುವ ವಿಭಿನ್ನ ತಲೆಯುಡಿಗೆಗಳು ಇವನೊಬ್ಬ ಪೋರ್ಚುಗೀಸನೆಂಬುದನ್ನು ಧೃಢಪಡಿಸುತ್ತವೆ. ಇದೇ ಬಗೆಯ ಉಡುಗೆಯನ್ನು ತೊಟ್ಟಿರುವ ಪೋರ್ಚುಗೀಸರ ಅನೇಕ ಶಿಲ್ಪಗಳು ಹಂಪಿ ಪರಿಸರದಲ್ಲಿವೆ.[9] ಅಶ್ವದ ಹಿಂಬದಿಯಲ್ಲಿ ನಿಂತ ವ್ಯಕ್ತಿಯು ಒಂದು ಕೈಯಲ್ಲಿ ದಂಡವನ್ನು ಮತ್ತೊಂದು ಕೈಯಲ್ಲಿ ವಸ್ತುವೊಂದನ್ನು ಹಿಡಿದಿದ್ದಾನೆ. ಇವನು ಸಹ ಮೇಲುಡಿಗೆ ಮತ್ತು ಪ್ಯಾಂಟನ್ನು ಧರಿಸಿದ್ದಾನೆ. ತಲೆಯಲ್ಲಿ ತಲೆಯುಡಿಗೆ ಇದ್ದು, ಗಡ್ಡಧಾರಿಯಾಗಿರುವನು. ಇವನು ಅಶ್ವದ ಬಾಲವನ್ನು ಪರೀಕ್ಷಿಸುತ್ತಿರಬಹುದು.

ಇದೇ ರೀತಿಯಲ್ಲಿ ಕುದುರೆಯನ್ನು ಪರೀಕ್ಷೆ ಮಾಡುತ್ತಿರುವ ಇನ್ನೊಂದು ನಿರೂಪಣಾತ್ಮಕ ಶಿಲ್ಪವನ್ನು ವಿಠ್ಠಲ ದೇವಾಲಯದ ಮಹಾಮಂಟಪದ ದಕ್ಷಿಣ ಬದಿಯ ಅಧಿಷ್ಠಾನದಲ್ಲಿ ಕಡೆಯಲಾಗಿದೆ. ಈ ಶಿಲ್ಪವೂ ಸಹ ಬಹುತೇಕ ಮೊದಲಿನ ಶಿಲ್ಪವನ್ನೇ ಹೋಲುತ್ತದೆ. ಇದರಲ್ಲಿ ಅಶ್ವದ ಲಗಾಮನ್ನು ಹಿಡಿದ ವ್ಯಕ್ತಿಯೊಬ್ಬ ಅಶ್ವದ ಮುಂದೆ ನಿಂತಿದ್ದು, ಅಶ್ವವು ತನ್ನ ಬಾಯಿಯನ್ನು ತೆರೆದಿದೆ. ಇದರಲ್ಲಿ ಸಹ ಈ ವ್ಯಕ್ತಿಯು ಕುದುರೆಯ ಹಲ್ಲುಗಳನ್ನು ಪರೀಕ್ಷಿಸುತ್ತಿದ್ದಾನೆ. ಇವನು ಉದ್ದನೆಯ ತೋಳಿನ ಅಂಗಿ ಮತ್ತು ಪ್ಯಾಂಟನ್ನು ಧರಿಸಿರುವುದನ್ನು ಕಾಣಬಹುದು. ತಲೆಗೆ ದುಂಡನೆಯ ತಲೆಯುಡಿಗೆ ಅಥವಾ ಶಿರಸ್ತ್ರಾಣವನ್ನು ಧರಿಸಿದ್ದಾನೆ. ಅಶ್ವವು ತನ್ನ ಮುಂಬದಿಯ ಎರಡು ಕಾಲುಗಳನ್ನು ಮೇಲೆತ್ತಿ ಜಿಗಿಯುತ್ತಿರುವಂತೆ ಶಿಲ್ಪವನ್ನು ಕಡೆಯಲಾಗಿದೆ. ಅದರ ಹಿಂಬದಿಯಲ್ಲಿ ನಿಂತಿರುವ ವ್ಯಕ್ತಿಯು ತನ್ನ ಎಡಗೈಯಲ್ಲಿ ಖಡ್ಗವನ್ನು ಹಿಡಿದಿದ್ದು, ಬಲಗೈಯಲ್ಲಿ ಅಶ್ವದ ಬಾಲವನ್ನು ಹಿಡಿದುಕೊಂಡು ಪರೀಕ್ಷಿಸುತ್ತಿದ್ದಾನೆ. ಇವನು ಸಹ ಉದ್ದನೆಯ ತೋಳಿನ ಮೇಲಂಗಿಯನ್ನು ಮತ್ತು ಪ್ಯಾಂಟನ್ನು, ತಲೆಗೆ ತಲೆಯುಡಿಗೆಯನ್ನು ತೊಟ್ಟಿರುವಂತೆ ತೋರಲಾಗಿದ್ದು, ಇವರಿಬ್ಬರು ದೇಶೀಯ ಸೈನಿಕರು ಎಂಬುದನ್ನು ತಳ್ಳಿಹಾಕುವಂತಿಲ್ಲ.

ಕುದುರೆಗಳನ್ನು ಕೊಂಡುಕೊಳ್ಳಬೇಕಾದರೆ ಅವುಗಳ ಗುಣಲಕ್ಷಣಗಳನ್ನು ಪರೀಕ್ಷಿಸುವುದು ಹಿಂದಿನಿಂದ ಪ್ರಚಲಿತದಲ್ಲಿರುವ ಪದ್ಧತಿ. ಉತ್ತಮ ಲಕ್ಷಣಗಳನ್ನು ಹೊಂದಿರುವ ಕುದುರೆಗಳು ಅರಸನ ಸೈನ್ಯದಲ್ಲಿ ಇದ್ದರೆ, ಅವು ಅರಸನಿಗೆ ಶುಭವನ್ನು ಕೊಡುತ್ತವೆ. ಈ ಕುರಿತು ಅಭಿನವಚಂದ್ರನ ಅಶ್ವಶಾಸ್ತ್ರ ಮತ್ತು ಕೆಳದಿ ಬಸವರಾಜನ ಶಿವತತ್ವ ರತ್ನಾಕರ ಕೃತಿಗಳು

ಉತ್ತಮ ಮಾಹಿತಿ ನೀಡುತ್ತವೆ. ನರ್ಮದೆಯಿಂದ ಉತ್ತರಕ್ಕೆ ಇರುವ 54 ಕ್ಷೇತ್ರಗಳ ಕುದುರೆಗಳು ಕುಲ, ಬಲ, ತೇಜ, ಸ್ವರೂಪ, ಜವ ಪ್ರಮಾಣಗಳಲ್ಲಿ ಪರಿಪೂರ್ಣವಾಗಿವೆ. ನರ್ಮದೆಯಿಂದ ದಕ್ಷಿಣಕ್ಕೆ 90 ಕ್ಷೇತ್ರಗಳಲ್ಲಿ ಕುದುರೆಗಳು ಹುಟ್ಟುತ್ತವೆ. ಅವು ತೇಜ, ಕುಲ, ಜವ, ಪ್ರಮಾಣ ಮತ್ತು ಸತ್ವಗಳಲ್ಲಿ ಕನಿಷ್ಠವಾದವು ಎಂದು ಅಭಿನವಚಂದ್ರ ಉಲ್ಲೇಖಿಸುತ್ತಾನೆ.[10]

ಅಭಿನವಚಂದ್ರನು ತನ್ನ ಕುದುರೆಯ ಆಯಸ್ಸನ್ನು ನಿರ್ಣಯಿಸಲು ಬಳಕೆಯಲ್ಲಿದ್ದ ವಿಧಾನಗಳ ಬಗ್ಗೆ ತನ್ನ ಅಶ್ವಶಾಸ್ತ್ರ ಕೃತಿಯಲ್ಲಿ ಉಲ್ಲೇಖಿಸುತ್ತಾನೆ.

**"ಎರಡುಂ ತೆಱದಿಂದಾಯುವ**
**ನೆರೆಯೆ ಪರಿಕಿಸುವುದು ಬಾಹ್ಯಮಾಭ್ಯಂತರಮೆಂ**
**ಬೆರಡಱಕೊಳಂ ತನುವಿಂ ಬಾ**
**ಹಿರಮಂ ದಶನಂಗಳಿಂದ ಮಾಭ್ಯಂತರಮಂ"**

ಎಂದು ಉಲ್ಲೇಖಿಸುತ್ತಾನೆ.[11] ಅಂದರೆ ಅಶ್ವಗಳನ್ನು ಪರೀಕ್ಷಿಸಲು ಬಾಹ್ಯ ಮತ್ತು ಅಭ್ಯಂತರ ಎಂಬ ಎರಡು ವಿಧಾನಗಳಿವೆ. ಬಾಹ್ಯ ಎಂದರೆ ಕುದುರೆಯ ತನು ಅಂದರೆ ದೇಹವನ್ನು ಪರೀಕ್ಷಿಸುವುದು. ಅಭ್ಯಂತರ ಎನ್ನುವುದು ಅದರ ಹಲ್ಲುಗಳನ್ನು ಗಮನಿಸಿ ಆಯು ನಿರ್ಣಯ ಮಾಡುವ ವಿಧಾನ. ಕುದುರೆಗಳ ವಯಸ್ಸನ್ನು ಅವುಗಳ ಹಲ್ಲುಗಳನ್ನು ನೋಡಿ ಗುರುತಿಸಬೇಕೆಂದು ಶಿವತತ್ವ ರತ್ನಾಕರ ಕೃತಿ ತಿಳಿಸುತ್ತದೆ.[12] ಹಾಗಾಗಿ, ಈ ಮೇಲೆ ವಿವರಿಸಿರುವ ಶಿಲ್ಪಗಳು ಅಶ್ವಗಳ ಆಯಸ್ಸು ಮತ್ತು ಗುಣಲಕ್ಷಣಗಳನ್ನು ಪರೀಕ್ಷೆ ಮಾಡುತ್ತಿರುವ ಶಿಲ್ಪಗಳೆಂಬುದು ಸ್ಪಷ್ಟ. ಅಲ್ಲದೆ, ಕುದುರೆಗಳ ಹಲ್ಲನ್ನು ನೋಡಿ ಅದರ ವಯಸ್ಸನ್ನು ಕಂಡುಹಿಡಿಯುವ ಪದ್ಧತಿ ಇಂದಿಗೂ ಪ್ರಚಲಿತದಲ್ಲಿರುವುದು ಉಲ್ಲೇಖನೀಯ.

ವಿದೇಶಗಳಿಂದ ತರಿಸಿಕೊಳ್ಳುತ್ತಿದ್ದ ಕುದುರೆಗಳಿಗೆ ವಿಜಯನಗರ ಸಾಮ್ರಾಜ್ಯದಲ್ಲಿ ಹೆಚ್ಚಿನ ಬೇಡಿಕೆ ಇತ್ತು. ಇವುಗಳಿಗೆ ಹೆಚ್ಚಿನ ಬೆಲೆಯನ್ನು ಕೊಟ್ಟು ಅರಸರುಗಳು ಖರೀದಿಸುತ್ತಿದ್ದರು. ಅದು ಎಷ್ಟರಮಟ್ಟಿಗಿತ್ತೆಂದರೆ ಆಸ್ಥಾನದ ಆದಾಯದ ಬಹುಪಾಲು ಅದಕ್ಕೆ ಮೀಸಲಿಡಲಾಗಿತ್ತು. ಹಯ-ಗಜಗಳನ್ನು ಕೊಳ್ಳುವುದಕ್ಕೂ, ಅವುಗಳ ಮೇವನ್ನು ಒದಗಿಸುವುದಕ್ಕೂ ಆಗುವ ಖರ್ಚನ್ನು ವೃಥಾ ಎಂದು ಭಾವಿಸಬಾರದು ಎಂದು ಕೃಷ್ಣದೇವರಾಯನು ತನ್ನ ಅಮುಕ್ತಮಾಲ್ಯದದಲ್ಲಿ ಉಲ್ಲೇಖಿಸುತ್ತಾನೆ.[13] ವಿಜಯನಗರಕ್ಕೆ ಭೇಟಿ ನೀಡಿದ್ದ ವಿದೇಶಿ ಪ್ರವಾಸಿಗ ದುಆರ್ತೆ ಬಾರ್ಬೋಸಾ ಹೇಳುವಂತೆ "ಕುದುರೆಗಳ ಬೆಲೆ 300ರಿಂದ 600 ಡಕಟುಗಳು. ರಾಜನ ಸ್ವಂತ ಉಪಯೋಗಕ್ಕೆ ಬೇಕಾದ ಕೆಲವು ಕುದುರೆಗಳ ಬೆಲೆ 900 ರಿಂದ 1000 ಡಕಟ್ಟುಗಳು" ಎಂದಿದ್ದಾನೆ.[14] ಡೊಮಿಂಗೋ ಪ್ಯಾಸ್ "ಅರಸನು ಕುದುರೆಗಳ ಮತ್ತು ಆನೆಗಳ ಖರ್ಚಿಗಾಗಿ ಅವನು ಈ ಬಿಸ್ನಗರದಿಂದ ಬರುವ ಆದಾಯಗಳನ್ನು ಮೀಸಲಿಟ್ಟಿರುವನು" ಎನ್ನುತ್ತಾನೆ.[15] ಫರ್ನಾವೋ ನ್ಯೂನಿಜ್ "ರಾಜ(ಕೃಷ್ಣದೇವರಾಯ)ನು 30,000 ಪರ್ದಾವೋಗಳನ್ನು ಕೊಟ್ಟು ತನ್ನ ಅಧಿಕಾರಿಯೊಬ್ಬನನ್ನು ಗೋವಾಗೆ ಕುದುರೆ ಕೊಳ್ಳಲು ಕಳುಹಿಸಿದ" ಎಂದು ಉಲ್ಲೇಖಿಸುತ್ತಾನೆ.[16] ಇದರಿಂದಾಗಿ ವಿಜಯನಗರದ ಅರಸರು ಕುದುರೆಗಳನ್ನು ಕೊಳ್ಳಲು ಹೆಚ್ಚಿನ ಸಂಪತನ್ನು ವ್ಯಯಿಸುತ್ತಿದ್ದರು ಎಂಬುದು ಮಾತ್ರ ಸತ್ಯ. ಒಟ್ಟಾರೆಯಾಗಿ ಮಧ್ಯಯುಗದಲ್ಲಿ ಕುದುರೆಗಳ ಬೆಲೆಯನ್ನು ಈ ಕೆಳಗಿನ ಪಟ್ಟಿಯಲ್ಲಿ ನೀಡಲಾಗಿದೆ.[17]

| ಕ್ರಸಂ. | ವರ್ಷ | ದೇಶ | ಬೆಲೆ |
|---|---|---|---|
| 1 | 1293 | ಪರ್ಷಿಯಾದ ಕುದುರೆಗಳು | 200 ಲಿವ್ರೆಸ್ ಟರ್ನಾಯಿಸ್ |
| 2 | 1293 | ಪರ್ಷಿಯಾ ಮತ್ತು ಅರೇಬಿಯಾದ ಕುದುರೆಗಳು | 500 ಸಪ್ಪಿ ಅಥವಾ 100 ಅರೇಬಿಯಾ ಬೆಳ್ಳಿಯ ಮಾರ್ಕ್‌ಗಳು |
| 3 | 1293 | ಅರೇಬಿಯಾ | 100 ಮಾರ್ಕಗಳು |
| 4 | 1310 | . . „ . . | 220 ಚಿನ್ನದ ದಿನಾರುಗಳು |
| 5 | 1330 | . . „ . . | 220 ಚಿನ್ನದ ಕೆಂಪು ದಿನಾರುಗಳು |
| 6 | 1349 | . . „ . . | 100 ರಿಂದ 1000 ಚಿನ್ನದ ತುಣುಕುಗಳು |
| 7 | 1504 | . . „ . . | 200, 400, 500, 800 ಪರ್ದಾವ್ವೋಗಳು |
| 8 | 1516 | . . „ . . | 500 ಕ್ರುಜೆಡೋಗಳು |
| 9 | 1516 | . . „ . . | 600 ಕ್ರುಜೆಡೋಗಳು |
| 10 | 1516 | . . „ . . | 400 ಕ್ರುಜೆಡೋಗಳು |
| 11 | 1516 | . . „ . . | 300 ಕ್ರುಜೆಡೋಗಳು |
| 12 | 1537 | . . „ . . | 333 1/2 ಪರ್ದಾವ್ವೋಗಳು |

ಈ ಮೇಲಿನ ಪಟ್ಟಿಯಲ್ಲಿ 1293 ರಿಂದ 1537ರ ವರೆಗೆ ಜಾಲ್ತಿಯಲ್ಲಿದ್ದ ಕುದುರೆಗಳ ಬೆಲೆಯನ್ನು ನೀಡಲಾಗಿದೆ. ಇಷ್ಟು ಅಗಾಧ ಪ್ರಮಾಣದಲ್ಲಿ ಅರಸರು ಅಶ್ವಗಳಿಗೆ ಬೆಲೆಯನ್ನು ನೀಡಲೇಬೇಕಾಗಿತ್ತು. ಇಷ್ಟು ಹೆಚ್ಚು ಪ್ರಮಾಣದ ಬೆಲೆ ಕುದುರೆಗಳಿಗೆ ದೊರೆಯುತ್ತಿದ್ದುದರಿಂದ ವಿದೇಶಿಗರು ಇದರಿಂದ ಆಕರ್ಷಿತರಾದರು.

ವಿದೇಶಿ ವರ್ತಕರು ಸರಬರಾಜು ಮಾಡುತ್ತಿದ್ದ ಅಶ್ವಗಳಲ್ಲಿ ವಿವಿಧ ದರ್ಜೆಗಳಿದ್ದವು. ಅವುಗಳ ದರ್ಜೆಗಳಿಗೆ ಅನುಗುಣವಾಗಿ ಬೆಲೆಗಳನ್ನು ನಿಗಧಿ ಮಾಡಲಾಗುತ್ತಿತ್ತು. ಇವರು ಅರಬ್, ಪರ್ಷಿಯಾ, ಹೊರ್ಮುಜ್‌ಗಳಿಂದ ಕುದುರೆಗಳನ್ನು ಇಲ್ಲಿಗೆ ಸಾಗಿಸಲು ತಗಲುವ ವೆಚ್ಚ, ತಮ್ಮ ಲಾಭ, ಇಲ್ಲಿ ಪಾವತಿಸಬೇಕಾದ ತೆರಿಗೆಗಳು ಎಲ್ಲವನ್ನೂ ಸೇರಿಸಿ ಕುದುರೆಗಳ ಬೆಲೆಯನ್ನು ನಿರ್ಧರಿಸುತ್ತಿದ್ದರು. ಕ್ರಿ.ಶ. 1567ರಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗ ಸೀಜರ್ ಫೆಡರಿಕ್‌ನು 'ಕುದುರೆಗಳಿಗೆ ಹೆಚ್ಚು ಬೆಲೆ ಬರುವಂತೆ ಮಾಡಲೇಬೇಕು. ಏಕೆಂದರೆ ಇವನ್ನು ಪರ್ಷಿಯಾದಿಂದ ಒರ್ಮುಸಿಗೆ ಸಾಗಿಸಿ, ಅಲ್ಲಿಂದ ಗೋವಾಕ್ಕೆ ತಂದು ಗೋವಾದಲ್ಲಿ ಪ್ರತಿ ಕುದುರೆಗೆ ಇನ್ನೂರ ನಲವತ್ತು ಪಗೋಡ ಸುಂಕ ಕೊಟ್ಟು ಬಿಜನಗರಕ್ಕೆ ತರಬೇಕು ಎಂದಿದ್ದಾನೆ.[18] ಹಾಗಾಗಿ, ಇವರು ಹೇಳಿದ ಬೆಲೆಯನ್ನೇ ನೀಡಿದಂತೆ ತೋರುತ್ತದೆ. ಇಲ್ಲಿ ಹೆಚ್ಚಿನ ಹಣ ನೀಡುತ್ತಿದ್ದುದರಿಂದ ಅವರಿಗೆ ಆಸೆ ದಿನೇದಿನೇ ಹೆಚ್ಚಾಗತೊಡಗಿತು. ಫರ್ನಾವ್ವೋ ನ್ಯೂನಿಜ್ ಹೇಳುವಂತೆ "ಅವನು (ನರಸಿಂಗ) ಒರೂಮುಝ್ ಮತ್ತು ಆದೀಮ್‌ಗಳಿಂದ ತನ್ನರಾಜ್ಯದೊಳಗೆ ಕುದುರೆಗಳನ್ನು ತರುವಂತೆ ಮಾಡಿದ ಮತ್ತು ಕುದುರೆಗಳಿಗಾಗಿ ಅವರು ಕೇಳಿದಷ್ಟು ಕೊಡುವ ಮೂಲಕ ವರ್ತಕರಿಗೆ ಬಹಳ ಲಾಭ ಮಾಡಿಕೊಡುತ್ತಿದ್ದ. ಅವುಗಳು ಸತ್ತಿರಲಿ, ಜೀವಂತವಾಗಿರಲಿ ಸಾವಿರ

ಪರ್ದಾವೋಗಳಿಗೆ ಮೂರರಂತೆ ಕೊಂಡುಕೊಳ್ಳುತ್ತಿದ್ದ ಮತ್ತು ಸಮುದ್ರದಲ್ಲಿ ಸತ್ತವುಗಳ ಬಾಲವನ್ನು ಮಾತ್ರ ಅವನಲ್ಲಿಗೆ ತರುತಿದ್ದರು ಮತ್ತು ಅವನು ಅದಕ್ಕೆ ಅದು ಜೀವಂತವಾಗಿದ್ದಂತೆಯೇ ಹಣ ತೆರುತ್ತಿದ್ದ" ಎಂದಿದ್ದಾನೆ.[19] ಈ ಉಲ್ಲೇಖವನ್ನು ಕೂಲಂಕುಷವಾಗಿ ಗಮನಿಸಿದರೆ ಅಂದು ವರ್ತಕರು ಹಣಕ್ಕಾಗಿ ಅತ್ಯಂತ ಕೆಳದರ್ಜೆಯ ಮತ್ತು ವಯಸ್ಸಾದ ಅಶ್ವಗಳನ್ನು ತಂದು ಹೆಚ್ಚಿನ ಬೆಲೆಗೆ ಮಾರಾಟ ಮಾಡುತ್ತಿದ್ದ ಸಂಭವವನ್ನು ತಳ್ಳಿಹಾಕುವಂತಿಲ್ಲ. ಇಂತಹ ಸನ್ನಿವೇಷಗಳನ್ನು ಮತ್ತು ಮೋಸವನ್ನು ತಡೆಯುವ ಸದುದ್ದೇಶದಿಂದ ವಿದೇಶಗಳಿಂದ ವಿಜಯನಗರಕ್ಕೆ ಆಮದಾಗುತ್ತಿದ್ದ ಕುದುರೆಗಳನ್ನು ಬಹುಶಃ ಅವುಗಳ ಗುಣಾವಗುಣಗಳನ್ನು, ವಯಸ್ಸನ್ನು ಪರೀಕ್ಷಿಸುವ ಮೂಲಕ ದರ್ಜೆಗಳನ್ನು ಕಂಡುಹಿಡಿಯುತ್ತಿದ್ದರೆಂದು ತೋರುತ್ತದೆ. ಹಾಗಾಗಿ, ವಿಠ್ಠಲ ದೇವಾಲಯದ ಮಹಾಮಂಟಪದ ಅಧಿಷ್ಠಾನದ ಸುತ್ತಲೂ ಅರಬ್ ಮತ್ತು ಪೋರ್ಚುಗೀಸರು ತಂದ ಅಶ್ವಗಳನ್ನು ಮಾರಾಟ ಮಾಡುತ್ತಿರುವ, ಅವುಗಳನ್ನು ಸಲಹುತ್ತಿರುವ ಶಿಲ್ಪಗಳ ಜೊತೆಯಲ್ಲಿ ಅವುಗಳ ಆಯುರ್ನಿರ್ಣಯದ ಪರೀಕ್ಷೆ ಮಾಡುತ್ತಿರುವ ಶಿಲ್ಪಗಳನ್ನು ಕಡೆಯಲಾಗಿರುವುದು ಗಮನಾರ್ಹ.

ಒಟ್ಟಾರೆಯಾಗಿ ಹೇಳುವುದಾದರೆ ವಿಜಯನಗರ ಕಾಲದಲ್ಲಿ ವಿದೇಶಗಳಿಂದ ತರುತಿದ್ದ ಅಶ್ವಗಳಲ್ಲಿ ವಿವಿಧ ದರ್ಜೆಗಳಿದ್ದವು. ಅವುಗಳ ಗುಣಾವಗುಣಗಳನ್ನು, ವಯಸ್ಸನ್ನು ಪರೀಕ್ಷಿಸಿ, ಅವುಗಳ ದರ್ಜೆಗಳಿಗೆ ಅನುಗುಣವಾಗಿ ಬೆಲೆಯನ್ನು ನೀಡುತಿದ್ದರು. ಅಶ್ವಗಳ ಶಿಲ್ಪಗಳು ಅನೇಕ ಕಡೆಗಳಲ್ಲಿ ಕಂಡುಬರುತ್ತವೆ. ಆದರೆ ವಿದೇಶಿ ಅಶ್ವ ವರ್ತಕರ ಜೊತೆಗೆ ಅವರು ತಂದ ಅಶ್ವಗಳನ್ನು ಪರೀಕ್ಷೆ ಮಾಡುತ್ತಿರುವ ಶಿಲ್ಪಗಳು ಅದರಲ್ಲಿಯೂ ಆಯುರ್ನಿರ್ಣಯದ ಪರೀಕ್ಷೆಯ ಶಿಲ್ಪ ದೊರೆತಿರುವುದು ಅತಿ ವಿರಳ. ಹಾಗಾಗಿ ಇವುಗಳು ಅಪರೂಪದ ಕಥಾನಕ ಶಿಲ್ಪಗಳು ಎನ್ನಬಹುದು.

### ಅಡಿಟಿಪ್ಪಣಿಗಳು

1. ವಿವೇಕ ರೈ ಬಿ.ಎ., (ಸಂ.), 2005, *ಪ್ರವಾಸಿ ಕಂಡ ವಿಜಯನಗರ*, ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪು. 195
2. ಕೃಷ್ಣಭಟ್ಟ ಕೆ., (ಅನುವಾದ), *ಕೌಟಿಲ್ಯನ ಅರ್ಥಶಾಸ್ತ್ರ*, ಧಾರವಾಡ: ಸಮಾಜ ಪುಸ್ತಕಾಲಯ, ಪು.185
3. ಕಲುಬುರ್ಗಿ ಎಂ.ಎಂ. (ಸಂ.), 1998, *ಮುಮ್ಮಡಿ ಸೋಮೇಶ್ವರನ ಮಾನಸೋಲ್ಲಾಸ*, ಧಾರವಾಡ: ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಪು. 95.
4. Nilakanta Sastri K.A., 2000, *The Colas*, Madras, University of Madras, and Jayakumar P. 'Horse Trade of Malaimandalam in Chola Country', Ramesh K.V. and others(ed.), *Sripushpanjali (Recent Researches in Prehistory, Proto history, Art, Architecture, Numismatics, Iconography and Epigraphy) Dr.C.R Srinivasan Commemoration Volume, Vol.II*, New Delhi: Bharatiya Kala Prakashana, pp. 256-259
5. Anila Verghese, 2000, 'Foreigners with Horses at Vijayanagara', *The Journals of the Asiatic Society of Bambay*, Vol.74, Mumbai: pp.203,
6. ಗೋವಾ ಬಿಜಾಪುರದ ಸುಲ್ತಾನರ ಅಧೀನದಲ್ಲಿದ್ದ ಪ್ರಮುಖ ಬಂದರು ಪಟ್ಟಣ. ಇದು ಬಿಜಾಪುರದ ಆದಿಲ್ ಷಾಹಿಗಳ ಬಳಿಯಲ್ಲಿದ್ದರೆ ಅರಬ್ಬರು ಮತ್ತು ಪೋರ್ಚುಗೀಸರು ತರುತ್ತಿದ್ದ ಅಶ್ವಗಳನ್ನು ಅವರೇ ಕೊಳ್ಳುತ್ತಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿದ್ದ ಹೊನ್ನಾವರ, ಭಟ್ಕಳ ಬಂದರುಗಳು

ಗೋವಾದ ಎದುರು ದಿನೇ ದಿನೇ ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಿದ್ದವು. ಅಲ್ಬುಕರ್ಕ್ ಸಹ ಪಶ್ಚಿಮ ಕರಾವಳಿಯ ಸಮುದ್ರದ ಮೇಲಿನ ಅರಬ್ಬರ ಹಿಡಿತವನ್ನು ತಪ್ಪಿಸಬೇಕಾಗಿತ್ತು. ಒಂದುವೇಳೆ ಗೋವಾವನ್ನು ಪೋರ್ಚುಗೀಸರು ಗೆದ್ದುಕೊಂಡರೆ ಅವರು ತಂದ ಎಲ್ಲಾ ಅಶ್ವಗಳನ್ನು ರಾಯರು ಕೊಳ್ಳಬಹುದಿತ್ತು. ಇದರ ಹಿಂದೆ ರಾಯ ತನ್ನ ಸೈನ್ಯವನ್ನ ಬಲಗೊಳಿಸುವ ಉದ್ದೇಶವನ್ನು ಹೊಂದಿದ್ದು, ಅಲ್ಬುಕರ್ಕನಿನಗೆ ತನ್ನ ಸಹಾಯವನ್ನು ನೀಡಿದನು. ಹಾಗಾಗಿ, ಪೋರ್ಚುಗೀಸರು ಗೋವಾವನ್ನು ಗೆಲ್ಲುವ ಮೂಲಕ ವ್ಯಾಪಾರವನ್ನು, ಅದರಲ್ಲಿಯೂ ಅಶ್ವ ವ್ಯಾಪಾರದಲ್ಲಿ ಏಕಸ್ವಾಮ್ಯತೆ ಪಡೆದರು. ನಂತರ ಒಪ್ಪಂದದಂತೆ ತಾವು ತಂದ ಎಲ್ಲಾ ಅಶ್ವಗಳನ್ನು ವಿಜಯನಗರದ ಅರಸರಿಗೆ ಮಾರಾಟ ಮಾಡತೊಡಗಿದರು. ಹೆಚ್ಚಿನ ಮಾಹಿತಿಗೆ ನೋಡಿ: ನಿರ್ಮಲ್‌ರಾಜ್, 2010, ಶ್ರೀಕೃಷ್ಣದೇವರಾಯ ಮತ್ತು ಪೋರ್ಚುಗೀಸ್ ಗೌರ್ನರ್ ಅಪೋನ್ಸೋ ಡಿ ಅಲ್ಬುಕರ್ಕ್‌ರ ನಡುವಣ ರಾಜತಾಂತ್ರಿಕ ಸಂಬಂಧಗಳು', ಗೋಪಾಲ್ ಆರ್., ಚಿಕ್ಕಮಾರೇಗೌಡ, ಗಂಗಾಧರ ಟಿ.ಎಸ್., (ಸಂ.), ವಿಜಯನಗರ ಅಧ್ಯಯನ, *ಸಂ.15*, ಮೈಸೂರು: ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಪು.118–123 ಮತ್ತು Ramachandraiya O., 1939, 'Krishnadevaraya and Fr. Luis Embassy to Vijayanagara,' *Proceedings of the Indian History Congress*, Culcutta: pp.724-246

7. Mahalingam T.V., 1975, *Administration of Social Life Under Vijayanagara* , *Part-1*, Madras: University of Madras, pp.174
8. Heras F., 1927, 'Historical Carvings at Vijayanagara', *The Quarterly Journals of the Mythic Society, Vol.17, Part-2*, Bangalore: pp.85-88.
9. ಹಂಪಿ ಪರಿಸರದ ಅನೇಕ ಸ್ಮಾರಕಗಳಲ್ಲಿ ಅರಬ್ಬರು ಅಥವಾ ತುರ್ಕರ ಮತ್ತು ಪೋರ್ಚುಗೀಸರ ಶಿಲ್ಪಗಳಿವೆ. ಇವರ ಶಿಲ್ಪಗಳನ್ನು ಗುರುತಿಸಲು ಇರುವ ಮುಖ್ಯ ಆಧಾರ ಅವರ ಶಿಲ್ಪಗಳಲ್ಲಿ ಕಂಡುಬರುವ ಉಡುಪುಗಳು. ಪೋರ್ಚುಗೀಸರ ಶಿಲ್ಪಗಳನ್ನು ವಿಠಲ ದೇವಾಲಯದ ನೈಋತ್ಯಕ್ಕೆ ಇರುವ ಅಪೂರ್ಣ ಪ್ರವೇಶದ್ವಾರ, ತಿರುವೇಂಗಳನಾಥ ದೇವಾಲಯದ ಪ್ರಾಕಾರ ಮಂಟಪದ ಅಧಿಷ್ಠಾನ ಮತ್ತು ಮಾಲ್ಯವಂತ ರಘುನಾಥ ದೇಗುಲದ ನೂರು ಕಂಬಗಳ ಮಂಟಪದ ಅಧಿಷ್ಠಾನಗಳಲ್ಲಿ ಪೋರ್ಚುಗೀಸರ ಶಿಲ್ಪಗಳಿವೆ. ಹೆಚ್ಚಿನ ಮಾಹಿತಿಗೆ ನೋಡಿ: Anila Verghese, 2006, 'Depiction of Foreigners at Vijayanagara', Shanmugam P. and Srinivasan Srinivasan(ed.), *Recent Advances in Vijayanagara Studies*, Chennai: New Era Publications, pp.198-208
10. ಮಂಜುನಾಥನ್ ಜಿ.ಜಿ.(ಸಂ.), 1987, ಅಭಿನವಚಂದ್ರ ವಿರಚಿತ ಅಶ್ವಶಾಸ್ತ್ರ, ಮೈಸೂರು: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಯಲ, ಪು.12
11. ಅದೇ, ಪು.55
12. Srimathi Radha Krishnamurthy, 1995, *Sivatatva Ratnakara of Keladi Basavaraja A cultural Study*, Keladi, Keladi Museum and Historical Research Bureau, pp.287
13. ನಿರುಪಮಾ(ಅನುವಾದ), 2010, ಶ್ರೀಕೃಷ್ಣದೇವರಾಯನ ಅಮುಕ್ತಮಾಲ್ಯದ, ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪು.47
14. ವಿವೇಕ ರೈ ಬಿ.ಎ., ಪೂರ್ವೋಕ್ತ, ಪು. 41
15. ಅದೇ, ಪು. 89
16. ಅದೇ, ಪು. 132
17. ಸೋಮಶೇಖರ್ ಎಸ್.ವೈ., 2009, ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ. ಚಿತ್ರದುರ್ಗ: ಸಂಚಿಕೆ ಪ್ರಕಾಶನ, ಪು. 49
18. ವಿವೇಕ ರೈ ಬಿ.ಎ., ಪೂರ್ವೋಕ್ತ, ಪು.195
19. ವಿವೇಕ ರೈ ಬಿ.ಎ., ಪೂರ್ವೋಕ್ತ, ಪು.117

■

# ಮಹಮೂದ್ ಗಾವಾನ್ : ಹುಡುಕಾಟದ ಸುತ್ತಮುತ್ತ

□ ದೇವು ಪತ್ತಾರ
ಸ್ಥಾನೀಕ ಸಂಪಾದಕರು,
ವಿಜಯ ಕರ್ನಾಟಕ,
ನಾರಾಯಣ್ ಎನ್‌ಕ್ಲೇವ್,
ಎಸ್.ವಿ.ಪಿ. ಚೌಕ,
ಕಲಬುರ್ಗಿ–585102

ಬಹಮನಿ ದೊರೆಗಳಿಗಿಂತ ಅತ್ಯಂತ ಹೆಚ್ಚು ಜನಪ್ರಿಯನಾದವನು ಮಹಮೂದ್ ಗಾವಾನ್. ಅದಕ್ಕೆ ಅವನ ಕುಂದಿಲ್ಲದ ವ್ಯಕ್ತಿತ್ವವೇ ಕಾರಣ. ಮಧ್ಯಕಾಲೀನ ಭಾರತದ ಮಾತ್ರವಲ್ಲ, ಮಾನವ ಸಮುದಾಯದ ಇತಿಹಾಸದಲ್ಲಿಯೇ ಅಪರೂಪ ವ್ಯಕ್ತಿತ್ವ ಗಾವಾನ್‌ನದು. ಗಾವಾನ್‌ನಿಗಿಂತ ವಿದ್ವಾಂಸರು, ಆಡಳಿತಗಾರರು, ಕವಿಗಳು, ನಿಸ್ಪೃಹರು, ಪ್ರಾಮಾಣಿಕರು, ಸೇನಾನಾಯಕರು ಇತಿಹಾಸದ ಪುಟಗಳಲ್ಲಿ ಸಾಕಷ್ಟು ಜನ ಸಿಗುತ್ತಾರೆ. ಅಂತಹವರ ಸಾಲಿನಲ್ಲಿ ಗಾವಾನ್ ನಿಲ್ಲುತ್ತಾನೆ ಎಂದರೆ ಅದರಲ್ಲಿ ಅಚ್ಚರಿಯೇನೂ ಇಲ್ಲ. ಈ ಎಲ್ಲ ಗುಣ–ವಿಶೇಷಣಗಳು ಒಬ್ಬನೇ ವ್ಯಕ್ತಿಯಲ್ಲಿ ಇವೆಯಲ್ಲ ಎಂಬುದೇ ಸೋಜಿಗದ ಸಂಗತಿ. ಅದಕ್ಕಿಂತ ಹೆಚ್ಚು ಅಚ್ಚರಿ ಪಡುವ ಮತ್ತು ಬೆರಗಾಗುವ ಸಂಗತಿ ಎಂದರೆ ಪ್ರಾಮಾಣಿಕತೆಯೇ ಮೈವೆತ್ತಂತಿದ್ದ ಅವನ ವ್ಯಕ್ತಿತ್ವ, ಸ್ವಾರ್ಥದ ಲವಲೇಶವೂ ಇಲ್ಲದಂತೆ ಸಂತನ ಹಾಗೆ ಬದುಕಿದ ಅವನ ಜೀವನ ಇಹದೊಳಗಿದ್ದೂ ಪರದ ಕಡೆಗೆ ಹೇಗೆ ಚಲಿಸಬೇಕು ಎಂಬುದಕ್ಕೆ ಮಾದರಿಯಂತಿದೆ. ಈ ಬರಹ ಗಾವಾನ್ ಎಂದರೆ ಯಾರು? ಏನಾಗಿದ್ದ? ಎಂಬ ಸಂಗತಿಗಳಿಗಿಂತ ಅವನ ಸುತ್ತ ನಡೆದ ಅಧ್ಯಯನಗಳ ಬಗ್ಗೆ ಕೇಂದ್ರೀಕರಿಸಿದೆ. ಗಾವಾನ್ ಹುಡುಕಾಟ ನಡೆಸಿದ ವ್ಯಕ್ತಿಗಳು ಮತ್ತು ಅವರ ವ್ಯಕ್ತಿತ್ವದ ಅನ್ವೇಷಣೆಯೇ ಇಲ್ಲಿನ ಕೇಂದ್ರ ಕಾಳಜಿ. ಕೇಂದ್ರಕ್ಕೆ ಹೋಗುವ ಮುನ್ನ ಕೆಲವು ಸ್ಥೂಲ ವಿಷಯ– ವಿಚಾರಗಳನ್ನ ಅರಿಯುವುದು ಒಳಿತು.

ಉತ್ತರ ಇರಾನ್‌ನ ಗಿಲಾನ್ ಪ್ರಾಂತ್ಯದಲ್ಲಿ ಹುಟ್ಟಿದ (ಕ್ರಿ.ಶ. 1411) ಮಹಮೂದ್ ಗಾವಾನ್‌ನ ಪೂರ್ಣ ಹೆಸರು 'ಖ್ವಾಜಾ ಇಮಾದುದ್ದೀನ್ ಮಹಮೂದ್ ಗಿಲಾನಿ'. ಅವನ ತಂದೆಯೂ ಸೇರಿದಂತೆ ಗಿಲಾನ್ ಪ್ರಾಂತ್ಯದಲ್ಲಿ ಪ್ರತಿಷ್ಠಿತ ಆಡಳಿತ ವರ್ಗಕ್ಕೆ ಸೇರಿದವರಾಗಿದ್ದರು. ಅರಮನೆಯ

ಪಿತೂರಿ, ರಾಜಕೀಯಗಳಿಂದ ಬೇಸತ್ತ ಗಾವಾನ್ ವ್ಯಾಪಾರ ವಹಿವಾಟು ನಡೆಸುವ ಉದ್ದೇಶದಿಂದ ಕ್ರಿ.ಶ. 1453ರಲ್ಲಿ ಭಾರತದ ಚೌಲ್ ಬಂದರಿಗೆ ಬಂದಿಳಿದ. ದೆಹಲಿಗೆ ಹೋಗಿ ವ್ಯಾಪಾರ ಮಾಡುವ ಉದ್ದೇಶ ಹೊಂದಿದ್ದ ಗಾವಾನ್ ಧಾರ್ಮಿಕ, ಆಧ್ಯಾತ್ಮಿಕ ಕಾರಣಗಳಿಗಾಗಿ ದಖನ್‌ನ ರಾಜಧಾನಿಯಾಗಿದ್ದ ಬೀದರ್‌ನತ್ತ ಮುಖ ಮಾಡಿದ. ಬೀದರ್ ಬಹಮನಿ ದೊರೆಗಳ ಆಸ್ಥಾನದಲ್ಲಿ ಇದ್ದ ಇರಾನ್‌ನ ಖ್ಯಾತ ಸೂಫಿ ಸಂತ ನಿಯಮತ್ ಉಲ್ಲಾ ಕಿರ್ಮಾನಿಯ ಮೊಮ್ಮಗನ ಕಾಲಬಳಿ ಕುಳಿತು ಆಶೀರ್ವಾದ ಪಡೆಯುವ ಉದ್ದೇಶದಿಂದ ಬೀದರ್‌ಗೆ ಬಂದ ಗಾವಾನ್ ನಂತರದ ದಿನಗಳಲ್ಲಿ ಬಹಮನಿ ದೊರೆಗಳಿಗೆ ಪ್ರಿಯನಾದ. ಸೈನ್ಯವೂ ಸೇರಿದಂತೆ ಆಡಳಿತಾತ್ಮಕ ಸಂಗತಿಗಳಲ್ಲಿ ಒಂದೊಂದೆ ಮೆಟ್ಟಿಲು ಹತ್ತುತ್ತ ಪ್ರಧಾನಿಯ ಹುದ್ದೆಯವರೆಗೂ ತಲುಪಿದ. ಬುದ್ಧಿಮತ್ತೆ ಮತ್ತು ಜಾಣಾಕ್ಷ್ಯತನದಿಂದ ತಾನು ನಿರ್ವಹಿಸಿದ ಹುದ್ದೆಗಳಿಗೆ ಗೌರವ ತಂದ ಗಾವಾನ್ ಹಲವು ಸುಧಾರಣೆ-ಬದಲಾವಣೆಗಳಿಗೆ ಕಾರಣನಾದ. ಅವನ ವ್ಯಾಪಕವಾದ ಸುಧಾರಣೆಗಳು ಆಡಳಿತಾತ್ಮಕ ಕಾರಣಗಳಿಂದ ಬಹುಜನರಿಗೆ ಉಪಯುಕ್ತವಾಗಿದ್ದರೂ ಸ್ವಹಿತಾಸಕ್ತಿಯ ಕೆಲವರಿಗೆ ಅವು ಪಥ್ಯವಾಗಲಿಲ್ಲ. ಅದರ ಪರಿಣಾಮವಾಗಿ ರೂಪಿತಗೊಂಡ ಷಡ್ಯಂತ್ರದಿಂದಾಗಿ ಗಾವಾನ್‌ನ ಹತ್ಯೆ (ಕ್ರಿ.ಶ. 1481 ರ ಏಪ್ರಿಲ್ 5 ರಂದು) ನಡೆಯಿತು. ಗಾವಾನ್‌ನ ಸಾವಿನ ಕೆಲವೇ ದಿನಗಳ ನಂತರ ಬಹಮನಿ ಸಾಮ್ರಾಜ್ಯವು ಕುಸಿತ ಕಂಡಿತು.

ಸ್ವತಃ ಕವಿ-ಗದ್ಯ ಬರಹಗಾರನಾಗಿದ್ದ ಮಹಮೂದ್ ಗಾವಾನ್ ರಚಿಸಿದ ಎರಡು ಗ್ರಂಥಗಳು ಸದ್ಯ ಲಭ್ಯವಿವೆ. ನೆರೆಯ ಮತ್ತು ವಿದೇಶಿ ದೊರೆಗಳು, ವಿದ್ವಾಂಸರು, ಲೇಖಕರು, ಧಾರ್ಮಿಕ ವ್ಯಕ್ತಿಗಳು ಹಾಗೂ ಕುಟುಂಬದ ಸದಸ್ಯರಿಗೆ ಗಾವಾನ್ ಬರೆದ 154 ಪತ್ರಗಳ ಸಂಗ್ರಹ ರಿಯಾಜುಲ್ ಇನ್ಶಾ. ಭಾರತದ ಅದರಲ್ಲೂ ವಿಶೇಷವಾಗಿ ದಖನ್ನಿನ ಇತಿಹಾಸ ರಚಿಸಲು ಹೊರಡುವವರಿಗೆ ಮಹತ್ವದ ಆಕರ ಗ್ರಂಥ. ಆರ್ಥಿಕ, ಸಾಮಾಜಿಕ, ಐತಿಹಾಸಿಕ ಸಂಗತಿಗಳು ಈ ಪುಸ್ತಕದಲ್ಲಿ ದಾಖಲಾಗಿವೆ. ಹೈದರಾಬಾದ್ ಪುರಾತತ್ವ ಇಲಾಖೆಯ ನಿರ್ದೇಶಕರಾಗಿದ್ದ ಗುಲಾಂ ಯಜ್ದಾನಿ ಅವರ ಸಹಾಯ-ಪ್ರೇರಣೆಗಳೊಂದಿಗೆ 1948ರಲ್ಲಿ ಎಸ್. ಚಾಂದ್ ಅವರು ರಿಯಾಜುಲ್ ಇನ್ಶಾ ಗ್ರಂಥವನ್ನು ಪ್ರಕಟಿಸಿದರು. ಗಾವಾನ್ ರಚಿಸಿದ ಮತ್ತೊಂದು ಗ್ರಂಥ ಫಾರ್ಸಿ ಕಾವ್ಯಮೀಮಾಂಸೆ ಮನಾಜಿರುಲ್ ಇನ್ಶಾ. ಸಾಹಿತ್ಯದ ಗಂಭೀರ ಚರ್ಚೆಗಳನ್ನು ಒಳಗೊಂಡಿರುವ ಈ ಗ್ರಂಥವು ಹಲವು ಕಾಲ ಹಸ್ತಪ್ರತಿಯಾಗಿಯೇ ಉಳಿದಿತ್ತು. 2006ರಲ್ಲಿ ಈ ಗ್ರಂಥ ಮುದ್ರಣ ಕಂಡಿದೆ. ಇವೆರಡೂ ಅಲ್ಲದೆ ಗಾವಾನ್‌ನು ರಚಿಸಿದ ಕವಿತೆಗಳನ್ನು ಒಳಗೊಂಡ ದಿವಾನ್ ಏ ಅಷ್ರ್ ಎಂಬ ಸಂಕಲನವೂ ಇತ್ತು ಎಂಬ ಮಾಹಿತಿ ಮಾತ್ರ ದೊರೆಯುತ್ತದೆ. ದಿವಾನ್‌ಗಳ ಹಸ್ತಪ್ರತಿಯನ್ನು ನೋಡಿರುವ ಬಗ್ಗೆ ಯಾವೊಬ್ಬ ವಿದ್ವಾಂಸರೂ ಉಲ್ಲೇಖಿಸಿಲ್ಲ. ಬಹುಶಃ ಹಸ್ತಪ್ರತಿ ರೂಪದಲ್ಲಿದ್ದಾಗಲೇ ಅದು ನಾಶವಾಗಿರುವ ಸಾಧ್ಯತೆಗಳೇ ಹೆಚ್ಚು. ಆದರೆ, ಗಾವಾನ್ ರಚಿಸಿದ ಕೆಲವು ಕವಿತೆಗಳು ನಂತರದ ಫಾರ್ಸಿ ಬರಹಗಾರರ ಕೃತಿಗಳಲ್ಲಿ ಉಲ್ಲೇಖಗೊಂಡಿವೆ. ಆಯ್ದ ಸಾಲುಗಳ ರೂಪದಲ್ಲಿ ಇರುವ ಕವಿತೆಗಳನ್ನು ಕೂಡಿ ಹಾಕುವ ಅಗತ್ಯವಿದೆ.

ಸಮಕಾಲೀನನಾಗಿದ್ದ ಅಬ್ದುಲ್ ಕರೀಮ್ ಹಮ್ದಾನಿಯು ಮಹಮೂದ್ ಗಾವಾನ್‌ನ ಕುರಿತ ಮಹತ್ವದ ವಿವರಗಳಿರುವ ಜೀವನ ಚರಿತ್ರೆ ರಚಿಸಿದ್ದ ಎಂದು ತಿಳಿದು ಬರುತ್ತದೆ. ಈ ಗ್ರಂಥದ ಹಸ್ತಪ್ರತಿಯೂ ಲಭ್ಯವಾಗಿಲ್ಲ. ಆದರೆ, ಹಮ್ದಾನಿಯ ಪುಸ್ತಕದ ವಿವರಗಳೇ ಫೆರಿಸ್ತಾನ ಗುಲ್ಶನ್ ಏ ಇಬ್ರಾಹಿಂದಲ್ಲಿದೆ. ತಾರೀಖ್ ಏ ಫೆರಿಸ್ತಾ ಎಂದೂ ಗುರುತಿಸಲಾಗುವ



ಈ ಗ್ರಂಥದ ಲೇಖಕನು ತಾನು ಉಪಯೋಗಿಸಿದ ಗ್ರಂಥಗಳ ಪಟ್ಟಿಯನ್ನು ನೀಡಿದ್ದಾನೆ. 29 ಪುಸ್ತಕಗಳ ಪಟ್ಟಿಯಲ್ಲಿ ಹಮ್ದಾನಿಯ ಕೃತಿಯೂ ಸೇರಿಕೊಂಡಿದೆ. ಫೆರಿಸ್ತಾನ ಗ್ರಂಥವು ನಾಲ್ಕು ಬಾರಿ ಇಂಗ್ಲಿಷಿಗೆ ಭಾಷಾಂತರಗೊಂಡಿದೆ. ಮದ್ರಾಸ್ ಸೈನ್ಯದ ಲೆಫ್ಟಿನೆಂಟ್ ಕರ್ನಲ್ ಆಗಿದ್ದ ಜಾನ್ ಬ್ರಿಗ್ಸ್ ಅನುವಾದಿಸಿ 1829ರಲ್ಲಿ ಪ್ರಕಟಿಸಿದ ಹಿಸ್ಟರಿ ಆಫ್ ದ ರೈಸ್ ಆಫ್ ಮಹಮ್ಮಡನ್ ಪವರ್ ಇನ್ ಇಂಡಿಯಾ ಗ್ರಂಥವು ನಾಲ್ಕು ಸಂಪುಟಗಳಲ್ಲಿದೆ. ಅತ್ಯಂತ ಜನಪ್ರಿಯ ಅನುವಾದ ಎಂದು ಪರಿಗಣಿಸಲಾಗುವ ಬ್ರಿಗ್ಸ್‌ನ ಗ್ರಂಥದಲ್ಲಿ ಬಹಮನಿ ಇತಿಹಾಸಕ್ಕೆ ಸಂಬಂಧಿಸಿದಂತಹ ಮಹತ್ವದ ವಿವರಗಳು ಎರಡನೇ ಸಂಪುಟದಲ್ಲಿ ಚರ್ಚಿಸಲಾಗಿದೆ. ಅದಕ್ಕಿಂತ ಮುಂಚೆಯೇ ಈಸ್ಟ್ ಇಂಡಿಯಾ ಕಂಪೆನಿಯ ಸೇವೆಯಲ್ಲಿ ಕ್ಯಾಪ್ಟನ್ ಆಗಿದ್ದ ಜೊನಾಥನ್ ಸ್ಕಾಟ್ ಅನುವಾದಿಸಿದ ಫೆರಿಸ್ತಾ'ಸ್ ಹಿಸ್ಟರಿ ಆಫ್ ಡೆಕ್ಕನ್ 1794ರಲ್ಲಿ ಎರಡು ಸಂಪುಟಗಳಲ್ಲಿ ಪ್ರಕಟವಾಗಿತ್ತು. ಅದಕ್ಕಿಂತ ಮೊದಲು ಕಂಪೆನಿಯಲ್ಲಿ ಅಧಿಕಾರಿಯಾಗಿದ್ದ ಅಲೆಕ್ಸಾಂಡರ್ ಡವ್ 1768ರಲ್ಲಿ ಹಿಸ್ಟರಿ ಆಫ್ ಹಿಂದೂಸ್ತಾನ್ ಎಂಬ ಶೀರ್ಷಿಕೆಯಲ್ಲಿ ಮೂರು ಸಂಪುಟಗಳಲ್ಲಿ ಪ್ರಕಟಿಸಿದ್ದ. ಎಲಿಯಟ್ ಅಂಡ್ ಡಾಸನ್ ಅವರು ಕೂಡ ಫೆರಿಸ್ತಾನ ಕೃತಿಯ ಆಯ್ದ ಭಾಗಗಳನ್ನು ಅನುವಾದಿಸಿದ್ದರು. ಗಾವಾನ್‌ಗೆ ಸಂಬಂಧಿಸಿದಂತೆ ಫೆರಿಸ್ತಾನ ಚರಿತ್ರೆಯ ಪುಸ್ತಕವು ಅತ್ಯಂತ ಮಹತ್ವದ ಗ್ರಂಥ. ಫೆರಿಸ್ತಾನು ತನ್ನ ಗ್ರಂಥದಲ್ಲಿ ನೀಡುವ ವಿವರಗಳಲ್ಲಿ 'ಸಮಕಾಲೀನರ ಪೈಕಿ ಗಣಿತದಲ್ಲಿ ಗಾವಾನ್‌ನಿಗೆ ಸರಿಸಮ ಇದ್ದವರು ಕೆಲವೇ ಜನ' ಎಂಬಂತ ವಿವರಗಳೂ ಇವೆ.

ಫೆರಿಸ್ತಾನ ಸಮಕಾಲೀನನಾಗಿದ್ದ ಅಹ್ಮದ್‌ನಗರದ ಸೈಯದ್ ಅಲಿ ಬಿನ್ ಅಜೀಜುಲ್ಲಾ ತಬಾತಬಾಯಿ ರಚಿಸಿದ ಬುರ್ಹಾನ್ ಏ ಮಾಸ್ಸಿರ್ ಗ್ರಂಥವು ಗಾವಾನ್ ಅಧ್ಯಯನಕ್ಕೆ ಸಂಬಂಧಿಸಿದಂತೆ ಮತ್ತೊಂದು ಮಹತ್ವದ ಫಾರ್ಸಿ ಗ್ರಂಥ. ಮೇಜರ್ ಜೆ.ಎಸ್. ಕಿಂಗ್ ಅವರು ಈ ಗ್ರಂಥವನ್ನು ಅನುವಾದಿಸಿ ಇಂಡಿಯನ್ ಆ್ಯಂಟಿಕ್ವರಿಯಲ್ಲಿ ಸರಣಿಯಾಗಿ ಪ್ರಕಟಿಸಿದ್ದರು. ನಂತರ 1900ರಲ್ಲಿ ಬಹಮನಿ ಡೈನಾಸ್ಟಿ ಶೀರ್ಷಿಕೆ ಅಡಿಯಲ್ಲಿ ಲಂಡನ್‌ನಿಂದ

ಪ್ರಕಟವಾಯಿತು. ರಷ್ಯಾದ ಪ್ರವಾಸಿ ಅಥನಾಸಿ ನಿಕಿಟಿನ್‌ನು ಗಾವಾನ್ ಪ್ರಧಾನಿಯಾಗಿದ್ದ ದಿನಗಳಲ್ಲಿಯೇ ಬೀದರ್‌ಗೆ ಭೇಟಿ ನೀಡಿದ್ದ ತನ್ನ ಪ್ರವಾಸದ ಅನುಭವಗಳನ್ನು ಬಿಯಾಂಡ್ ತ್ರೀ ಸೀಸ್ ಎಂಬ ಗ್ರಂಥದಲ್ಲಿ ದಾಖಲಿಸಿದ್ದಾನೆ. ಅದರಲ್ಲಿ ಖ್ವಾಜಾ ಜಹಾನ್ ಕುರಿತು ವಿವರವಾಗಿ ಉಲ್ಲೇಖಿಸಿದ್ದಾನೆ. ನಿಕಿಟನ್ ಜೀವನ ಆಧರಿಸಿ 1957ರಲ್ಲಿ ನಿರ್ಮಿತವಾದ ಕೆ.ಎ.ಅಬ್ಬಾಸ್ ನಿರ್ದೇಶನದ ಕಥಾಚಿತ್ರ 'ಪರದೇಸಿ'ಯಲ್ಲಿ ಮಹಮೂದ್ ಗಾವಾನ್‌ನ ಪಾತ್ರವನ್ನು ಪೃಥ್ವಿರಾಜ್ ಕಪೂರ್ ನಿರ್ವಹಿಸಿದ್ದರು. ರಷ್ಯಾ ಮತ್ತು ಭಾರತೀಯ ಅವತರಣಿಕೆಗಳೆರಡೂ ಇದ್ದ ಈ ಚಿತ್ರದಲ್ಲಿ ಎರಡು ದೃಶ್ಯಗಳು ಗಾವಾನ್‌ಗೆ ಸಂಬಂಧಿಸಿದ್ದಾಗಿದ್ದವು. ಗಾವಾನ್‌ನ ಸ್ನೇಹಿತನಾಗಿದ್ದ ಇತಿಹಾಸಕಾರ ವಿದ್ವಾಂಸ ಅಲ್‌ಸಖ್‌ವಿ ಹತ್ಯೆಗೆ ಸಂಬಂಧಿಸಿದಂತೆ ಭಿನ್ನವಾದ ವಿವರಗಳನ್ನು ನೀಡುತ್ತಾನೆ. ಇರಾನ್‌ನಲ್ಲಿ ವಾಸಿಸುತ್ತಿದ್ದ ಅಲ್‌ಸಖ್‌ವಿಯು ಖ್ಯಾತ ಇಸ್ಲಾಮಿ ವಿದ್ವಾಂಸ ಇಬ್ನ್ ಹಜರ್ ಅಸ್ಕಲಾನಿಯ ಪ್ರಮುಖ ಶಿಷ್ಯನಾಗಿದ್ದ. ಭಾರತದಲ್ಲಿ ಇದ್ದ ಅಸ್ಕಲಾನಿಯ ಏಕೈಕ ಶಿಷ್ಯ ಎಂದರೆ ಮಹಮೂದ್ ಗಾವಾನ್.

'ಒಳ್ಳೆಯತನ' ಮತ್ತು ಅಪರೂಪದ ವ್ಯಕ್ತಿತ್ವದ ಕಾರಣದಿಂದ ಗಾವಾನ್ ಕುರಿತ ಅಧ್ಯಯನ ಮತ್ತು ಹುಡುಕಾಟ ಮೇಲಿಂದ ಮೇಲೆ ಬೇರೆ ಬೇರೆ ಸ್ಥರ ಮತ್ತು ಭಿನ್ನ ದನಿಗಳಲ್ಲಿ ನಡೆಯುತ್ತಲೇ ಬಂದಿದೆ. ಅದು ಮುಂದುವರೆದಿದೆ- ಮುಂದುವರೆಯುತ್ತಿದೆ ಕೂಡ. ಈ ಹುಡುಕಾಟವು ಕಾಲ-ದೇಶ-ಭಾಷೆಗಳನ್ನು ಮೀರಿ ನಡೆಯುತ್ತಿದೆ ಎಂಬುದು ಅಚ್ಚರಿಯ ಸಂಗತಿಯಾದರೂ ಸತ್ಯವಾದದ್ದು. ಪಾರಸಿಯಲ್ಲಿ ಆರಂಭವಾದ ದಾಖಲೀಕರಣವು ನಂತರ ಉರ್ದು, ಮರಾಠಿ, ಇಂಗ್ಲಿಷ್, ಕನ್ನಡ, ತೆಲುಗು ಭಾಷೆಗಳಲ್ಲಿಯೂ ಮುಂದುವರೆದಿದೆ.

ಇಂಗ್ಲಿಷಿನಲ್ಲಿ ಪ್ರಕಟವಾದ ಮಹಮೂದ್ ಗಾವಾನ್ ಕುರಿತ ಮೊದಲ ಮಹತ್ವದ ಉಲ್ಲೇಖ ದೊರಕುವುದು ಕ್ಯಾಪ್ಟನ್ ಮೆಡೋಸ್ ಟೇಲರ್ ಬರೆದು ಪ್ರಕಟಿಸಿದ ಎ ಸ್ಟುಡೆಂಟ್ಸ್ ಮ್ಯಾನುಯೆಲ್ ಆಫ್ ಇಂಡಿಯನ್ ಹಿಸ್ಟರಿ (ಕ್ರಿ.ಶ. 1870) ಗ್ರಂಥದಲ್ಲಿ. ಬಹಮನಿ ಸಾಮ್ರಾಜ್ಯದ ಬಗ್ಗೆ ವಿವರವಾದ ಮಾಹಿತಿಗಳನ್ನು ಒಳಗೊಂಡ ಮೊದಲ ಆಂಗ್ಲಭಾಷೆಯ ಗ್ರಂಥ ಇದು. ಬೀದರ್ ಸಮೀಪದ ನಳದುರ್ಗ ಕೋಟೆಯ ಉಸ್ತುವಾರಿ ವಹಿಸಿಕೊಂಡಿದ್ದ ಮೆಡೋಸ್ ಟೇಲರ್‌ನು ಆಗಿನ ರಾಜಧಾನಿಯಾಗಿದ್ದ ಹೈದರಾಬಾದ್‌ಗೆ ಹೋಗುವ ಮಾರ್ಗದಲ್ಲಿ ಬರುವ ಬೀದರ್ ಹಾಗೂ ಕೋಟೆಯ ಬಗ್ಗೆ ಆಸಕ್ತಿ ಹೊಂದಿದವನಾಗಿದ್ದನು. ತನ್ನ ಹಿಸ್ಟರಿಯಲ್ಲಿ ದಖನ್ ಪ್ರದೇಶಕ್ಕೆ ಹೆಚ್ಚಿನ ಆದ್ಯತೆ ನೀಡಿರುವ ಟೇಲರ್ ಬಹಮನಿ ಅರಸರ ಬಗ್ಗೆ ವಿವರವಾಗಿ ಚರ್ಚೆ ನಡೆಸಿದ್ದಾನೆ. ಗಾವಾನ್‌ನ ವ್ಯಕ್ತಿತ್ವವನ್ನು ಬಹುವಾಗಿ ಮೆಚ್ಚಿಕೊಂಡಿದ್ದ ಟೇಲರ್‌ನು ಒಳ್ಳೆಯ ಮಾತುಗಳನ್ನು ಬರೆದಿದ್ದಾನೆ. ಗಾವಾನ್‌ನ ನಿಸ್ಪೃಹ ಬದುಕು ಟೇಲರ್‌ನ ಮೆಚ್ಚುಗೆಗೆ ಪಾತ್ರವಾಗಿತ್ತು. ಕಿರಿಯ ವಯಸ್ಸಿನ ಅರಸುಕುಮಾರರನ್ನು ಸಿಂಹಾಸನದ ಮೇಲೆ ಕೂಡಿಸಿ ಆಡಳಿತ ನಡೆಸಿದ ಗಾವಾನ್ ಅವನ ನಂತರ ಬೀದರ್‌ನಲ್ಲಿ ಪ್ರಧಾನಿಗಳು ನಡೆದುಕೊಂಡ ರೀತಿ ಹಾಗೂ ದೆಹಲಿಯಲ್ಲಿ ಪ್ರಧಾನಿಗಳೇ ಅರಸನಾಗಿ ಅಧಿಕಾರ ಹಿಡಿದದ್ದಕ್ಕಿಂತ ತೀರಾ ಭಿನ್ನವಾದ ನಡವಳಿಕೆಯಾಗಿತ್ತು ಎಂಬುದು ಟೇಲರ್‌ನ ಅಭಿಪ್ರಾಯವಾಗಿತ್ತು.

The Character of Mahmood Gawan stands out broadly and grandly, not only among all his contemporaries, but among all the ancient Mahomedans of India, as unapproachably perfect and consistent. The utter

absence of selfishness or of self-aggrandisement in his public conduct and policy, his perfect and unaffected devotion to his sovereign the queen, through two trying and helpless minorities, when he might, as others had done at Dehly, and his colleagues did after him at Beeder, have created an independent kingdom for himself; his noble and judicious reforms, his skill and bravery in war, his justice and public and private benevolence, have, in the aggregate, no equals in Mahomedan history of India.

ಬಿಡಿಬಿಡಿಯಾದ ಲೇಖನ ಮತ್ತು ಪ್ರಮುಖ ಗ್ರಂಥಗಳಲ್ಲಿ ದಾಖಲಾದ ಉಲ್ಲೇಖಗಳನ್ನು ಹೊರತು ಪಡಿಸಿ ಗಾವಾನ್ ಬಗ್ಗೆಯೇ ಕೇಂದ್ರೀಕರಿಸಿದ ಮೊದಲ ಪುಸ್ತಕ ಪ್ರಕಟವಾದದ್ದು ಉರ್ದು ಭಾಷೆಯಲ್ಲಿ. ಗುಲ್ಬರ್ಗದ ನಿವಾಸಿಯಾಗಿದ್ದ ಸಾರ್ವಜನಿಕ ವ್ಯವಹಾರಗಳ ನಿವೃತ್ತ ಕಾರ್ಯದರ್ಶಿಯಾಗಿದ್ದ ಮೌಲ್ವಿ ಮಹ್ಮದ್ ಅಜೀಜ್ ಮಿರ್ಜಾ ಅವರು ರಚಿಸಿದ ಸೀರತುಲ್ ಮಹಮೂದ್ ಅರ್ಥಾತ್ ಬಹಮನಿ ಸಾಮ್ರಾಜ್ಯದ ಮಂತ್ರಿ ಖ್ವಾಜಾ ಜಹಾನ್ ಇಮಾದುದ್ದೀನ್ ಮಹಮೂದ್ ಗಾವಾನ್ ಇವರ ಜೀವನ ಚರಿತ್ರೆ, ಕ್ರಿ.ಶ. 1896ರಲ್ಲಿ ಮುದ್ರಣವಾಗಿದ್ದ ಈ ಪುಸ್ತಕ ನಂತರ ಮೂರು ಮುದ್ರಣಗಳು ಕಂಡಿತು. 1967ರಲ್ಲಿ ನಿಜಾಮಿ ಪ್ರೆಸ್‌ನಿಂದ ಮೂರು ಸಾವಿರ ಪ್ರತಿಗಳನ್ನು ಪ್ರಕಟಿಸಲಾಗಿತ್ತು. ಉರ್ದುವಿನಲ್ಲಿ ಸಾಮಾನ್ಯವಾಗಿ ಜೀವನ ಚರಿತ್ರೆಗಳಿಗೆ 'ಸವಾನೆ ಉಮ್ರಿ' ಅಥವಾ 'ಸವಾನೆ ಹಯಾತ್'ಎಂಬ ಪದ ಬಳಲಾಗುತ್ತದೆ. ಪ್ರವಾದಿ ಮಹಮ್ಮದ್ ಅವರ ಜೀವನ ಚರಿತ್ರೆಗೆ ಮಾತ್ರ 'ಸೀರತ್' ಪದ ಬಳಸುವ ಪರಿಪಾಠ ಇದೆ. ಗಾವಾನ್‌ನ ಜೀವನ ಚರಿತ್ರೆಗೆ 'ಸೀರತುಲ್' ಪದ ಬಳಸಿರುವುದು ವಿಶೇಷ. ನೂರ ಹತ್ತು ಪುಟಗಳ ಈ ಪುಸ್ತಿಕೆಯಲ್ಲಿ ಗಾವಾನ್ ರೇಖಾಚಿತ್ರವೂ ಸೇರಿದೆ. ಫಾರಸಿ ಪದಗಳು ವಿಪುಲವಾಗಿ ಬಳಸಲಾಗಿರುವ ಈ ಪುಸ್ತಕದಲ್ಲಿ ಗಾವಾನ್‌ನ ಮನಜಿರುಲ್ ಇನ್ಶಾ (ಕಾವ್ಯ ಮೀಮಾಂಸೆ) ಪುಸ್ತಕ ಕುರಿತ ವಿಶ್ಲೇಷಣೆಯು ಸೊಗಸಾಗಿದೆ.

ನರೇಂದ್ರನಾಥ್ ಲಾ ಅವರು ಪ್ರಮೋಷನ್ ಆಫ್ ಲರ್ನಿಂಗ್ ಇನ್ ಇಂಡಿಯಾ ಡ್ಯುರಿಂಗ್ ದ ಮಹಮ್ಮದನ್ ರೂಲ್ (1916) ಪುಸ್ತಕದಲ್ಲಿ ಮಧ್ಯಕಾಲೀನ ಭಾರತದಲ್ಲಿ ಅದರಲ್ಲೂ ವಿಶೇಷವಾಗಿ ಮುಸ್ಲಿಮ್ ದೊರೆಗಳ ಆಳ್ವಿಕೆಯ ಸಂದರ್ಭದಲ್ಲಿ ಇದ್ದ ಶೈಕ್ಷಣಿಕ ವ್ಯವಸ್ಥೆಯನ್ನು ಕುರಿತಾದುದಾಗಿತ್ತು. ದೆಹಲಿಯೇ ಕೇಂದ್ರ ಕಾಳಜಿ ಆಗಿದ್ದ ಈ ಪುಸ್ತಕದಲ್ಲಿ ದಖನ್‌ನಲ್ಲಿ ನಡೆದ ಶೈಕ್ಷಣಿಕ ಮಹತ್ವದ ಬೆಳವಣಿಗೆಗಳಿಗೂ ಸೂಕ್ತ ನ್ಯಾಯ ಒದಗಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಗಾವಾನ್ ಮದರಸಾ ಮತ್ತು ಅಲ್ಲಿನ ಶೈಕ್ಷಣಿಕ ಸ್ಥಿತಿಗಳ ಬಗ್ಗೆ ಈ ಪುಸ್ತಕದಲ್ಲಿ ಕೆಲವು ಪುಟಗಳನ್ನು ಮೀಸಲಿಡಲಾಗಿದೆ.

ಅಜೀಜ್ ಮಿರ್ಜಾ ಅವರ ನಂತರ ಬಂದ ಮತ್ತೊಂದು ಮಹತ್ವದ ಗ್ರಂಥ ಕನ್ನಡದ ಮೊದಲ ಕಾದಂಬರಿಯ ಲೇಖಕ ಎಂ.ಎಸ್.ಪುಟ್ಟಣ್ಣ ಅವರಿಂದ. *ಬಹಮನಿ ಸಂಸ್ಥಾನದ ಮಹಮೂದ್ ಗವಾನ ಎಂಬ ಮಹಾಮಂತ್ರಿಯ ಚರಿತ್ರೆ* ಎಂಬ ಶೀರ್ಷಿಕೆಯ ಅಡಿಯಲ್ಲಿ 1922ರಲ್ಲಿ ಪ್ರಕಟವಾಯಿತು. ಸ್ವತಂತ್ರ ಪುಸ್ತಿಕೆಯಾಗಿ ಪ್ರಕಟಿಸುವ ಮುನ್ನ ಎಂ.ಎಸ್. ಪುಟ್ಟಣ್ಣ ಅವರು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ 1919ರ ಎರಡು ಸಂಚಿಕೆಗಳಲ್ಲಿ ಪ್ರಕಟಿಸಿದ್ದರು. ಅದನ್ನೇ ಒಟ್ಟಾಗಿಸಿ ಪುಸ್ತಕ ರೂಪದಲ್ಲಿ ಮುದ್ರಿಸಿದರು. ಪೀಠಿಕೆಯಲ್ಲಿ ಬರೆದಿರುವ ಮಾತುಗಳು ಇಲ್ಲಿ ಉಲ್ಲೇಖಾರ್ಹವಾದವುಗಳು

'ಪ್ರಪಂಚದಲ್ಲಿ ಇದುವರೆಗೆ ಇದ್ದ ಅಮಾತ್ಯಶ್ರೇಷ್ಠರಲ್ಲಿ ಒಬ್ಬ ಪುಣ್ಯಾತ್ಮನ ಜೀವಮಾನ ಚರಿತ್ರೆಯನ್ನು ಸಂಕ್ಷೇಪವಾಗಿ ಬರೆಯಲು ಯತ್ನ ಮಾಡಿದೆ. ಸನ್ 1881ರಲ್ಲಿ ನಾನು ಹಿಂದೂ ಚರಿತ್ರ ದರ್ಪಣವೆಂಬ ಹಿಂದೂ ದೇಶದ ದೊಡ್ಡ ಚರಿತ್ರೆಯನ್ನು ಕನ್ನಡದಲ್ಲಿ ಬರೆಯಲು ವಿಷಯ ಶೋಧನೆಯನ್ನು ಮಾಡುತಾ ಇರುವಾಗ, ಇಂಥಾ ಒಬ್ಬ ಪುರುಷ ಇದ್ದನೆಂದು ಮೊದಲು ನನಗೆ ತಿಳಿದು ಬಂತು. ಇವನು ಬಾಳಿದ ಮುನಿವೃತ್ತಿಯೂ, ಇವನ ಅನ್ಯಾದೃಶವಾದ ನೈಸ್ಪೃಹ್ಯವೂ, ಲೋಕೋಪಕಾರ ಬುದ್ದಿಯೂ, ನನ್ನ ಮನಸ್ಸನ್ನು ಸೆರೆಗೈದುಬಿಟ್ಟವು. ಇಂಥವನ ಚರಿತ್ರೆಯನ್ನು ಕನ್ನಡದಲ್ಲಿ ಬರೆದರೆ ಪುರೋವೃದ್ಧಿಗೆ ಬರತಕ್ಕ ಯೌವನಸ್ಥರಿಗೂ ರಾಜ್ಯ ವಿಚಾರಲಂಪಟರಿಗೂ ಉಪಯುಕ್ತವಾಗಿರಬಹುದೆಂದು ನನಗೆ ತೋರಿತು' ಎಂದು ಬರೆಯುವ ಪುಟ್ಟಣ್ಣನವರು ತಾವು ನಡೆಸಿದ ಆಕರ ಶೋಧಗಳ ಪ್ರಸ್ತಾಪ ಮಾಡುತ್ತಾರೆ. '1) ಕರ್ನಲ್ ಮೆಡೋಸ್ ಟೇಲರ್ ಎಂಬಾತನು ಇಂಗ್ಲಿಷಿನಲ್ಲಿ ಬರೆದಿರುವ ಹಿಂದೂ ದೇಶದ ಚರಿತ್ರೆ 2) ದಖನ್ ದೇಶ, ಬಹಮನಿ ರಾಜ್ಯಗಳನ್ನು ಕುರಿತು ಫೆರಿಷ್ತಾ ಎಂಬ ಚರಿತ್ರಕರ್ತನು ರಚಿಸಿರುವ ಚರಿತ್ರೆಯ ಇಂಗ್ಲಿಷ ಭಾಷಾಂತರ 3) ಹಿತವಾದಿ ಎಂಬ ಕನ್ನಡ ಮಾಸಪತ್ರಿಕೆಯ ಒಂದು ಸಂಚಿಕೆ (ಇದರ ಬಗ್ಗೆ ಹೆಚ್ಚಿನ ವಿವರ ನನಗೆ ದೊರೆತಿಲ್ಲ) 4) ಉರ್ದು ಭಾಷೆಯಲ್ಲಿ ಬರೆದಿರುವ ಮಹಮೂದ್ ಗವಾನನ ಚರಿತ್ರೆ (ಬಹುಶಃ ಮಿರ್ಜಾ ಅವರ ಪುಸ್ತಕ ಇರಬೇಕು)'

ಎಂ.ಎಸ್.ಪುಟ್ಟಣ್ಣ ಅವರು ಗಾವಾನ್ ಕುರಿತ ಪುಸ್ತಕ ಪ್ರಕಟಿಸುವ ಸ್ವಲ್ಪ ದಿನಗಳ ಮುಂಚೆ ಬೀದರ್‌ಗೆ (1915) ಭೇಟಿ ನೀಡಿದ ಹೈದರಾಬಾದ್ ಪುರಾತತ್ವ ಇಲಾಖೆಯ ಮುಖ್ಯಸ್ಥರಾಗಿದ್ದ (ಸೂಪರಿಂಟೆಂಡೆಂಟ್) ಗುಲಾಂ ಯಜ್ದಾನಿ ಅವರು 1917ರಲ್ಲಿ ಆ್ಯಂಟಿಕ್ವಿಟಿಸ್ ಆಫ್ ಬೀದರ್ ಎಂಬ ಸ್ಮಾರಕಗಳ ಚಿತ್ರಗಳಿರುವ ಪುಸ್ತಕವನ್ನು ಪ್ರಕಟಿಸಿದ್ದರು. ಬೀದರ್ ನಗರದ ಸ್ಮಾರಕಗಳನ್ನು 14 ಪುಟಗಳಲ್ಲಿ ನೀಡಲಾಗಿತ್ತು. ಆ ಪೈಕಿ ನಾಲ್ಕು ಛಾಯಾಚಿತ್ರಗಳು ಗಾವಾನ್ ಮದರಸಾಕ್ಕೆ ಸೇರಿದವುಗಳಾಗಿದ್ದವು. ಮೊದಲ ಬಾರಿಗೆ ಮದರಸಾದ ನೆಲಮಟ್ಟದ ನೀಲಿನಕಾಶೆಯು ಈ ಪುಸ್ತಕದಲ್ಲಿ ದಾಖಲಾಯಿತು. ಮರುಮುದ್ರಣದ ಸಂದರ್ಭದಲ್ಲಿ ಯಜ್ದಾನಿ ಅವರು ತಮ್ಮ ಪುಸ್ತಕವನ್ನು ಕೇವಲ ಛಾಯಾಚಿತ್ರಗಳಿಗೆ ಮಾತ್ರ ಸೀಮಿತಗೊಳಿಸದೇ ಬೀದರ್‌ನ ಇತಿಹಾಸ ಕುರಿತಂತೆ ಕೆಲವು ಅಪರೂಪದ ಮಾಹಿತಿಗಳನ್ನು ಒಳಗೊಂಡ ಬರಹವನ್ನು ಸೇರಿಸಿದ್ದರು. ಅದರಲ್ಲಿ ಸಹಜವಾಗಿಯೇ ಗಾವಾನ್ ಕುರಿತ ಮಹತ್ವದ ಸಂಗತಿಗಳು ಸೇರಿಕೊಂಡಿದ್ದವು. ಗಾವಾನ್ ಹತ್ಯೆಯ ಕೊನೆಯ ಕ್ಷಣಗಳಲ್ಲಿ ಬರೆದ ಕವಿತೆಯೊಂದು ಕಾಫಿಖಾನ್‌ನ ಪುಸ್ತಕದಲ್ಲಿ ದಾಖಲಾಗಿದೆ ಎಂಬ ಅಂಶವೂ ಅದರಲ್ಲಿ ಸೇರಿತ್ತು. ಈ ಪುಸ್ತಕದಲ್ಲಿಯೇ ಮುಂದೊಂದು ದಿನ ಬೀದರ್ ಕುರಿತಾದ ಸಮಗ್ರ ಮಾಹಿತಿಗಳನ್ನು ಒಳಗೊಂಡ ಪುಸ್ತಕ ಪ್ರಕಟಿಸುವ ಭರವಸೆಯನ್ನೂ ನೀಡಿದ್ದರು. ಅದು 1944ರಲ್ಲಿ ಬೀದರ್- ಇಟ್ಸ್ ಹಿಸ್ಟರಿ ಅಂಡ್ ಮಾನುಮೆಂಟ್ಸ್ ಪ್ರಕಟಣೆಯೊಂದಿಗೆ ಪೂರ್ಣಗೊಂಡಿತು. ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್‌ನಿಂದ ಮುದ್ರಣವಾಗಿದ್ದ ಈ ಬೃಹತ್ ಗ್ರಂಥದಲ್ಲಿ ಗಾವಾನ್ ಮದರಸಾ ಕುರಿತು ವಿವರವಾಗಿಯೇ ಸೇರಿಸಲಾಗಿತ್ತು. ಮದರಸಾದ ಸಾಂಸ್ಕೃತಿಕ- ಐತಿಹಾಸಿಕ ಮಹತ್ವದ ಜೊತೆಗೆ ಅದರ ವಾಸ್ತುಶಿಲ್ಪದ ಹೆಗ್ಗಳಿಕೆಯನ್ನು ಅಂಕಿ-ಅಂಶಗಳೊಂದಿಗೆ ಸಾದರ ಪಡಿಸಲಾಗಿತ್ತು.

ಜಾಮೀಯಾ ಉಸ್ಮಾನಿಯಾದ ಬಿ.ಎ. ಸೀನಿಯರ್ ವಿದ್ಯಾರ್ಥಿ ಆಗಿದ್ದ ಮಹ್ಮದ್ ಜಹೀರುದ್ದೀನ್ ಸಾಹೇಬ್ ಅವರು 1930ರಲ್ಲಿ ಮಕ್ತಬಾ ಇಬ್ರಾಹಿಮೀಯಾದ ಪ್ರಕಟಣೆಯ ಸರಣಿಯಲ್ಲಿ ಮಹಮೂದ್ ಗಾವಾನ್ ಎಂಬ ಜೀವನ ಚರಿತ್ರೆ ಪ್ರಕಟಿಸಿದರು. ಹೈದರಾಬಾದ್‌ನಿಂದ ಪ್ರಕಟವಾದ ಈ ಗ್ರಂಥದ 500 ಪ್ರತಿಗಳು ಮಾತ್ರ ಮುದ್ರಿತವಾಗಿದ್ದವು.

1936 ದಖನ್ ಪ್ರದೇಶದಲ್ಲಿ ಒಂದು ಮಹತ್ವದ ವರ್ಷ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ 500ನೇ ವರ್ಷಾಚರಣೆಯ ನಿಮಿತ್ತ ನಡೆದ ಕಾರ್ಯಕ್ರಮಗಳು ಭಾರತದ ಮಾತ್ರವಲ್ಲದೆ ಜಗತ್ತಿನ ಇತಿಹಾಸ ತಜ್ಞರ ಗಮನ ದಖನ್ ಕಡೆಗೆ ತಿರುಗಲು ಕಾರಣವಾದವು. ದಖನ್ ಪ್ರದೇಶದ ಕಡೆಗೆ ಇತಿಹಾಸ ತಜ್ಞರ ಗಮನ ಹರಿಯುವುದಕ್ಕೆ ಕಾರಣವಾದ ಮತ್ತೊಂದು ಪ್ರಮುಖ ಸಂಗತಿ ಎಂದರೆ ಹಾರೂನ್‌ಖಾನ್ ಶೇರ್ವಾನಿ ಅವರು ಪ್ರಕಟಿಸಿದ *ಮಹಮೂದ್ ಗಾವಾನ್– ದ ಗ್ರೇಟ್ ವಜೀರ್ ಆಫ್ ಬಹಮನಿ* (1942 ಕಿತಾಬಿಸ್ತಾನ್, ಅಲಹಾಬಾದ್). ಶೇರ್ವಾನಿ ಅವರು ಈ ಗ್ರಂಥ ಪ್ರಕಟಿಸುವ ಮುನ್ನ ಗಾವಾನ್ ಕುರಿತಂತೆ ಹಲವು ಮಹತ್ವದ ಸಂಶೋಧನಾ ಲೇಖನಗಳನ್ನು ವಿವಿಧ ಜರ್ನಲ್‌ಗಳಲ್ಲಿ ಪ್ರಕಟಿಸಿ ಗಮನ ಸೆಳೆದಿದ್ದರು. ಗಾವಾನ್ ಪುಸ್ತಕವು ಸಾಂಸ್ಕೃತಿಕ ಲೋಕದಲ್ಲಿ ಸಂಚಲನ ಉಂಟು ಮಾಡಿತು. ಅದಕ್ಕೆ ಶೇರ್ವಾನಿ ಅವರ ಬರವಣಿಗೆಯಲ್ಲಿ ದಾಖಲಾದ ಗಾವಾನ್ ವ್ಯಕ್ತಿತ್ವದ ಅನಾವರಣವೇ ಕಾರಣ. ಪುಸ್ತಕವನ್ನು ಬಹುವಾಗಿ ಮೆಚ್ಚಿಕೊಂಡಿದ್ದ ಸರೋಜಿನಿ ನಾಯ್ಡು ಅವರು ಆ ಕುರಿತು ಶೇರ್ವಾನಿ ಅವರಿಗೆ ಪತ್ರ ಕೂಡ ಬರೆದಿದ್ದರು. ಜೊತೆಗೆ ಬಾಬು ರಾಜೇಂದ್ರ ಪ್ರಸಾದ್ ಸೇರಿದಂತೆ ಹಲವು ಗಣ್ಯರಿಗೆ ಈ ಪುಸ್ತಕದ ಮಹತ್ವ ವಿವರಿಸಿದ್ದರು. ಗಾವಾನ್ ಕುರಿತಂತೆ ಇಂಗ್ಲಿಷಿನಲ್ಲಿ ಪ್ರಕಟವಾದ ಏಕೈಕ ಮತ್ತು ಮೊದಲ ಗ್ರಂಥ ಶೇರ್ವಾನಿ ಅವರದು. ನಂತರದ ದಿನಗಳಲ್ಲಿ ಶೇರ್ವಾನಿ ಅವರು ಬಹಮನಿ ಇತಿಹಾಸಕ್ಕೆ ಸಂಬಂಧಿಸಿದಂತೆ *ದ ಬಹಮನೀಸ್ ಆಫ್ ಡೆಕ್ಕನ್* (1953) (ಪರಿಷ್ಕೃತ 1985) ಎಂಬ ಪುಸ್ತಕ ಪ್ರಕಟಿಸಿದರು. ಹಾಗೆಯೇ *ಸ್ಟಡೀಸ್ ಇನ್ ಮುಸ್ಲಿಮ್ ಪಾಲಿಟಿಕಲ್ ಥಾಟ್ ಅಂಡ್ ಅಡ್ಮಿನಿಸ್ಟ್ರೇಷನ್* (1981)ನಲ್ಲಿ ಗಾವಾನ್‌ನ ರಾಜತಾಂತ್ರಿಕ ನೈಪುಣ್ಯತೆಯ ಕಡೆಗೆ ಗಮನ ಸೆಳೆದಿದ್ದರು.

ಯಜ್ದಾನಿ ಅವರು ಸಂಪಾದಿಸಿದ *ಅರ್ಲಿ ಹಿಸ್ಟರಿ ಆಫ್ ಡೆಕ್ಕನ್* (1960) ಎರಡು ಸಂಪುಟಗಳು ದಖನ್ ಇತಿಹಾಸದ ವ್ಯಾಪಕ ಅಧ್ಯಯನಕ್ಕೆ ನಾಂದಿ ಹಾಡಿದರೆ 1973ರಲ್ಲಿ ಹಾರೂನ್ ಖಾನ್ ಶೇರ್ವಾನಿ ಸಂಪಾದಿಸಿದ *ಹಿಸ್ಟರಿ ಆಫ್ ಮಿಡೀವಲ್ ಡೆಕ್ಕನ್* ಸಂಪುಟಗಳು ಮಧ್ಯಕಾಲೀನ ದಖನ್ ಇತಿಹಾಸ ಕುರಿತ ಮಹತ್ವದ ಬರಹಗಳನ್ನು ಒಳಗೊಂಡಿದ್ದವು. ಸಹಜವಾಗಿಯೇ ಆ ಗ್ರಂಥಗಳಲ್ಲಿ ಗಾವಾನ್‌ನ ಸಾಹಿತ್ಯ– ಸಂಸ್ಕೃತಿ ಕುರಿತ ವಿವರವಾಗಿ ಚರ್ಚಿಸಲಾಗಿತ್ತು.

ಎನ್. ದೇವ್ರೆ ಅವರು ಪ್ರಕಟಿಸಿದ *ಎ ಶಾರ್ಟ್ ಹಿಸ್ಟರಿ ಆಫ್ ಪರ್ಶಿಯನ್ ಲಿಟರೇಚರ್ ಆ್ಯಟ್ ದ ಬಹಮನಿ, ಆದಿಲ್‌ಷಾಹಿ ಅಂಡ್ ದ ಕುತುಬ್‌ಷಾಹಿ ಕೋರ್ಟ್ಸ್* (1960, ಪೂನಾ) ಗ್ರಂಥವು ಗಾವಾನ್ ಸೇರಿದಂತೆ ಬಹಮನಿ ಅರಸರ ಆಡಳಿತದಲ್ಲಿ ಇದ್ದ ಬರಹಗಾರ, ಕವಿಗಳ ಕುರಿತ ಅಧ್ಯಯನ ನಡೆಸಿದ್ದಾಗಿತ್ತು. ಕಾವ್ಯರೂಪದಲ್ಲಿ ರಚನೆಯಾದ ಇತಿಹಾಸ ಮತ್ತು ಬರವಣಿಗೆಯ ವಿವಿಧ ಸ್ವರೂಪಗಳನ್ನು ದೇವ್ರೆ ಅವರು ಈ ಪುಸ್ತಕದಲ್ಲಿ ಚರ್ಚಿಸಿದ್ದರು. ಫಾರ್ಸಿ ಮಹತ್ವದ ಕವಿಯಾದ ಅಬ್ದುಲ್ ರಹಮಾನ್ ಜಾಮಿ ಮತ್ತು ಗಾವಾನ್ ನಡುವೆ ನಡೆದ ಪತ್ರವ್ಯವಹಾರ ಹಾಗೂ ಗಾವಾನ್ ಬಗ್ಗೆ

ಜಾಮಿ ಬರೆದ 'ಖಸಿದಾ' (ಪ್ರಶಂಸಾ ಪದ್ಯ)ವನ್ನೂ ಪ್ರಕಟಿಸಲಾಗಿತ್ತು. ದಖನ್ ಪ್ರದೇಶದ ಮಧ್ಯಕಾಲೀನ ಅವಧಿಯ ಸಾಹಿತ್ಯದ ಬಗ್ಗೆ ಅರಿಯುವುದಕ್ಕೆ ದೇವ್ರೆ ಅವರ ಪುಸ್ತಕ ಅತ್ಯಂತ ಮಹತ್ವದ ಗ್ರಂಥ.

ಬೀದರ್‌ನ ಬಿ.ವಿ.ಬಿ ಕಾಲೇಜಿನಲ್ಲಿ ಇತಿಹಾಸದ ಪ್ರಾಧ್ಯಾಪಕರಾಗಿದ್ದ ಎಲ್.ಆರ್. ಕುಲಕರ್ಣಿ ಅವರು ಕರ್ನಾಟಕ ವಿಶ್ವವಿದ್ಯಾಲಯದಿಂದ ಬಹಮನಿ ಆಡಳಿತದ ಬಗ್ಗೆ ಪಿಎಚ್‌ಡಿ ಸಂಶೋಧನೆ ನಡೆಸಿದವರು. ಅವರು ಕೆಂಭಾವಿಯಲ್ಲಿ ಮಾಡಿದ ಪ್ರಚಾರ ಉಪನ್ಯಾಸವನ್ನು ಮಹಮೂದ್ ಗವಾನ್ (1969) ಎಂಬ ಶೀರ್ಷಿಕೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗವು ಪ್ರಕಟಿಸಿತು. ಮೊದಲ ಮುದ್ರಣದಲ್ಲಿ ಮೂರು ಸಾವಿರ ಪ್ರತಿಗಳನ್ನು ಮುದ್ರಿಸಲಾಗಿತ್ತು. ನಂತರ 1976ರಲ್ಲಿ ಐದು ಸಾವಿರ ಪ್ರತಿಗಳ ಎರಡನೇ ಮುದ್ರಣ ಪ್ರಕಟಿಸಲಾಯಿತು. ಇದಲ್ಲದೇ ಕುಲಕರ್ಣಿ ಅವರು ಐಬಿಎಚ್ ಪ್ರಕಾಶನ ಸಂಸ್ಥೆಯವರು ಮಕ್ಕಳಿಗಾಗಿ ಪ್ರಕಟಿಸಿದ ಪುಸ್ತಕಗಳ ಸರಣಿಯಲ್ಲಿಯೂ ಮಹಮೂದ್ ಗವಾನ್ ಎಂಬ ಕಿರುಹೊತ್ತಿಗೆಯೂ ಸೇರಿತ್ತು. ಸೈದ್ಧಾಂತಿಕ ಕಾರಣಗಳಿಗಾಗಿ ತಕರಾರು ಹೊಂದಿದ್ದ ಕುಲಕರ್ಣಿ ಅವರು ಗಾವಾನ್ ಬಗ್ಗೆ ಬರೆದು ಕನ್ನಡಿಗರಿಗೆ ಪರಿಚಯಿಸುವಲ್ಲಿ ಯಶಸ್ವಿಯಾದರು. ಈ ಪುಸ್ತಕಗಳನ್ನು ಹೊರತುಪಡಿಸಿದರೆ ಗಾವಾನ್ ಬಗ್ಗೆ ಕನ್ನಡ ಬರಹಗಳು ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ.

ಮೂಲತಃ ಬೀದರ್ ನಿವಾಸಿಯಾಗಿದ್ದ ಅಲ್ಹಾಜ್ ಸೈಯದ್ ಮೊಹಮ್ಮದ್ ಬಿದರಿ ಅವರು ತಮ್ಮ ಬಾಲ್ಯದ ದಿನಗಳನ್ನು ಮದರಸಾದ ಆವರಣದಲ್ಲಿಯೇ ಕಳೆದವರು. ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಕರಾಚಿಗೆ ಹೋಗಿ ನೆಲೆಸಿದ ಅವರಿಗೆ ಬೀದರ್‌ನ, ಗಾವಾನ್ ಕುರಿತ ನೆನಪುಗಳು ಕಾಡಲಾರಂಭಿಸಿದವು. ಕರಾಚಿಯಲ್ಲಿ ಇದ್ದ ದಿನಗಳಲ್ಲಿಯೇ ಬಿದರಿ ಅವರು ಉರ್ದುವಿನಲ್ಲಿ ಮದರಸಾ ಎ ಮಹಮೂದ್ ಗಾವಾನ್ (1974) ಎಂಬ ಗ್ರಂಥವನ್ನು ಪ್ರಕಟಿಸಿದರು. ಮದರಸಾ ಕುರಿತ ಅತ್ಯಂತ ಮಹತ್ವದ ಗ್ರಂಥ ಇದಾಗಿದ್ದು ಗಾವಾನ್‌ನ ಹತ್ಯೆಯ ನಂತರದ ದಿನಗಳಲ್ಲಿ ಮದರಸಾದಲ್ಲಿ ಮುಂದುವರೆದ ಶಿಕ್ಷಣದ ಸ್ವರೂಪಗಳನ್ನೂ ವಿವರಿಸುತ್ತದೆ. ಹಾಗೆಯೇ ಮದರಸಾದಲ್ಲಿ ಸಂಭವಿಸಿದ ಸಿಡಿಲು ದುರಂತದ ಬಗ್ಗೆಯೂ ಈ ಪುಸ್ತಕ ಮಾಹಿತಿ ಒದಗಿಸುತ್ತದೆ.

ದ ಬಹಮನಿ ಸೂಫೀಸ್ (1989) ಪುಸ್ತಕ ಪ್ರಕಟಿಸಿರುವ ಮುಹಮ್ಮದ್ ಸುಲೇಮಾನ್ ಸಿದ್ದಿಕಿ ಅವರು ಸೂಫಿ ತತ್ವ ಮತ್ತು ಗಾವಾನ್ ನಡುವಿನ ಸಂಬಂಧಗಳನ್ನು ಕುರಿತ ಸಂಗತಿಗಳನ್ನು ಪ್ರಸ್ತಾಪಿಸಿದ್ದಾರೆ. ಮೊಹಮ್ಮದ್ ತಾಹೀರ್ ಲೈಬ್ರರಿಯನ್‌ಶಿಪ್ ಅಂಡ್ ಲೈಬ್ರರಿ ಸೈನ್ಸ್ ಇನ್ ಇಂಡಿಯಾ (1994) ಪುಸ್ತಕದಲ್ಲಿ ಗಾವಾನ್ ಮದರಸಾದಲ್ಲಿ ಗ್ರಂಥಗಳು ಮತ್ತು ಪುಸ್ತಕಗಳಿಗೆ ನೀಡಲಾಗಿದ್ದ ಮಹತ್ವದ ಕುರಿತ ಮಾಹಿತಿ ನೀಡಲಾಗಿದೆ. ಭಾರತದ ಗ್ರಂಥಾಲಯಗಳ ಇತಿಹಾಸದಲ್ಲಿ ಮದರಸಾ ಗ್ರಂಥಾಲಯಕ್ಕೆ ಇದ್ದ ಮಹತ್ವವನ್ನು ಈ ಗ್ರಂಥವು ಸೂಚಿಸುತ್ತದೆ. ನಂತರದ ದಿನಗಳಲ್ಲಿ ಗಾವಾನ್‌ನನ್ನು ಹುಡುಕಿ ಬಂದವಳು ಜರ್ಮನಿಯ ಹೆಸರಾಂತ ಲೇಖಕಿ ಅನ್ನಾಮೇರಿ ಶಿಮೆಲ್. ಇಸ್ಲಾಮ್ ಮತ್ತು ಸೂಫಿ ತತ್ವಜ್ಞಾನದಲ್ಲಿ ನಿಷ್ಣಾತೆ ಆಗಿರುವ ಶಿಮೆಲ್ ತನ್ನ ಪುಸ್ತಕಗಳಲ್ಲಿ ಗಾವಾನ್ ಕುರಿತು ಸೊಗಸಾದ ಸಾಲುಗಳನ್ನು ಬರೆದಿದ್ದಾಳೆ. ಹಾರ್ವರ್ಡ್ ವಿಶ್ವವಿದ್ಯಾಲಯದ ಪ್ರೊಫೆಸರ್ ಆಗಿದ್ದ ಶಿಮೆಲ್ ಅವರು ಭಾರತದಲ್ಲಿ ಇಸ್ಲಾಮಿನ ಬೆಳವಣಿಗೆಯ ಹೆಜ್ಜೆಗುರುತುಗಳನ್ನು ದಾಖಲಿಸಿದ್ದಾರೆ.

ಗುಲ್ಬರ್ಗದವರಾದ ರೇವಣಸಿದ್ದಯ್ಯ ರುದ್ರಸ್ವಾಮಿಮಠ ಅವರು ಮಹಮೂದ್ ಗಾವಾನ್‌ನ ಜೀವನವನ್ನು ಕುರಿತ ಗುರು ಗಾವಾನ್ ನಾಟಕವನ್ನು ರಚಿಸಿದ್ದಾರೆ. ಗುಲ್ಬರ್ಗ ಆಕಾಶವಾಣಿಯಿಂದ ಪ್ರಸಾರವಾದ ರಂಗರೂಪಕವು ನಂತರ 'ಬೀದರ್ ಕೋಟೆ ದುರಂತ' ಹೆಸರಿನಲ್ಲಿ ಪುಸ್ತಕ ರೂಪದಲ್ಲಿಯೂ ಪ್ರಕಟವಾಯಿತು. ಆಕಾಶವಾಣಿಯಲ್ಲಿ ಮುಖ್ಯಸ್ಥರಾಗಿದ್ದ ರಾಘವೇಂದ್ರರಾವ ಇಟಗಿ ಅವರು ಕೂಡ 'ಕೆಂಪಗಾಯಿತು ಬಿಳಿಗಡ್ಡ' ಎನ್ನುವ ರೆಡಿಯೋ ನಾಟಕ ರಚಿಸಿದ್ದರು. ಮತ್ತು ಅದು ಧಾರವಾಡ ಆಕಾಶವಾಣಿಯಿಂದ ಪ್ರಸಾರವಾಗಿತ್ತು ಎಂಬ ಮಾಹಿತಿ ಇದೆ. ಬೀದರ್‌ನ ಹಿಂದಿ ಲೇಖಕ ದತ್ತಾ ಮೈಲೂರಕರ್ ಅವರು ಗಾವಾನ್ ಬದುಕು ಆಧರಿಸಿದ ಹಿಂದಿ ನಾಟಕ ರಚಿಸಿದ್ದರು. ಪ್ರದರ್ಶನಕ್ಕೆ ಸಿದ್ಧಗೊಂಡರೂ ವೇದಿಕೆ ಹತ್ತದ ಈ ನಾಟಕಕ್ಕೆ ಪ್ರಕಟಣೆಯ ಭಾಗ್ಯವೂ ದೊರೆತಿಲ್ಲ.

ಸೂಫೀಸ್ ಆಫ್ ಬಿಜಾಪುರ ಪುಸ್ತಕದ ಮೂಲಕ ದಖನ್ ಇತಿಹಾಸದ ಅಧ್ಯಯನಕ್ಕೆ ನಾಂದಿ ಹಾಡಿದ ಅಮೆರಿಕಾದ ರಿಚರ್ಡ್ ಎಂ ಈಟನ್ ಅವರು ಎ ಸೋಷಿಯಲ್ ಹಿಸ್ಟರಿ ಆಫ್ ದ ಡೆಕ್ಕನ್ 1300–1761 (2005) ಪುಸ್ತಕದಲ್ಲಿ ಎಂಟು ಪ್ರಮುಖ ವ್ಯಕ್ತಿತ್ವಗಳನ್ನು ಇಟ್ಟುಕೊಂಡು ದಖನ್‌ನ ಸಾಮಾಜಿಕ ಇತಿಹಾಸ ಕಟ್ಟುವ ಪ್ರಯತ್ನ ಮಾಡಿದ್ದಾರೆ. ದಖನ್‌ನ ಬಂದೇ ನವಾಜ್ ಹಾಗೂ ಮಹಮೂದ್ ಗಾವಾನ್ ಕುರಿತಾದ ಸೊಗಸಾದ ಮತ್ತು ಅಚ್ಚುಕಟ್ಟಾದ ಬರವಣಿಗೆ ಈ ಪುಸ್ತಕದಲ್ಲಿದೆ. ಕಾವ್ಯಾತ್ಮಕ ಓದು ತೀರಾ ಇತ್ತೀಚಿನ ಗ್ರಂಥಗಳಲ್ಲಿಯೂ ಇರುವ ಮಾಹಿತಿಗಳನ್ನು ಒಳಗೊಂಡ ಸಂಗತಿಗಳು ಈ ಪುಸ್ತಕದ ಓದನ್ನು ಖುಷಿಗೊಳಿಸುತ್ತವೆ.

ಬೀದರ್‌ನ ಬಿ.ವಿ.ಬಿ ಕಾಲೇಜಿನಲ್ಲಿ ರಾಜ್ಯಶಾಸ್ತ್ರದ ಉಪನ್ಯಾಸಕರಾಗಿದ್ದ ಪ್ರೊ.ಬಿ.ಆರ್. ಕೊಂಡಾ ಅವರು ಇತಿಹಾಸ– ಪರಂಪರೆಯಲ್ಲಿ ವಿಶೇಷ ಆಸಕ್ತಿ ಉಳ್ಳವರಾಗಿದ್ದರು. ಗಾವಾನ್‌ನ ಬಗ್ಗೆ ವಿಪರೀತ ಪ್ರೀತಿ– ಹುಚ್ಚು ಹಚ್ಚಿಸಿಕೊಂಡಿದ್ದ ಕೊಂಡಾ ಅವರು ಕೆಲವು ದಿನಗಳ ಕಾಲ ಗಾವಾನ್ ಅಲ್ಲದೇ ಬೇರೆ ಯಾವ ವಿಷಯದ ಬಗ್ಗೆಯೂ ಉಪನ್ಯಾಸ ನೀಡಲು– ಮಾತನಾಡಲು ಹಿಂದೇಟು ಹಾಕುತ್ತಿದ್ದರು. ವಿವಿಧ ಪತ್ರಿಕೆಗಳಿಗೆ ಗಾವಾನ್ ಕುರಿತ ಆಸಕ್ತಿ ಹುಟ್ಟಿಸುವಂತಹ ಲೇಖನಗಳನ್ನು ಪ್ರಕಟಿಸಿದ್ದ ಕೊಂಡಾ ಅವರು 2006ರಲ್ಲಿ ಬೀದರ್ ಜಿಲ್ಲಾಡಳಿತದ ನೆರವಿನಿಂದ ಮಹಮೂದ್ ಗಾವಾನ್ ಮದರಸಾ ಬಗ್ಗೆ ಒಂದು ಸಾಕ್ಷ್ಯಚಿತ್ರ ಹೊರ ಬರುವುದಕ್ಕೆ ಕಾರಣರಾಗಿದ್ದರು. ಗಾವಾನ್ ಬಗ್ಗೆ ದೃಶ್ಯ ಮಾಧ್ಯಮದಲ್ಲಿ ಬಂದ ಏಕೈಕ ರೂಪಕ ಅದು.

ಬೀದರ್‌ಗೆ ಬರುವ ಪ್ರತಿಯೊಬ್ಬ ಪ್ರವಾಸಿಯೂ ಮಹಮೂದ್ ಗಾವಾನ್ ಮದರಸಾಕ್ಕೆ ಭೇಟಿ ನೀಡಿಯೇ ನೀಡುತ್ತಾನೆ. ಹಾಗೆ ಮದರಸಾಕ್ಕೆ ಹೋಗದಿದ್ದರೆ ಆ ಭೇಟಿ ಅಪೂರ್ಣ ಎಂಬುದರಲ್ಲಿ ಎರಡು ಮಾತಿಲ್ಲ. ಕೆಲವರಾದರೂ ಗಾವಾನ್‌ನೇ ಕಟ್ಟಿಸಿದ ಕೆರೆಯ ದಂಡೆಯ (ಖ್ವಾಜಾ ಜಹಾನ ತಲಾಬ್) ಮೇಲಿರುವ ನೆಡುಮಾವಿನ ತೋಪುಗಳ ನಡುವೆ ಇರುವ ಸಮಾಧಿಗೆ ಭೇಟಿ ನೀಡಿ ಗೌರವ ಸಲ್ಲಿಸದೇ ಇರಲಾರರು. ಗಾವಾನ್ ಬಗೆಗಿನ ಹುಡುಕಾಟ ಮತ್ತು ಅನ್ವೇಷಣೆ ಮುಂದುವರೆದಿದೆ. ಒಳ್ಳೆಯತನ ಮತ್ತು ಪ್ರಾಮಾಣಿಕತೆ ಜೀವಂತ ಇರುವವರೆಗೂ ಗಾವಾನ್‌ನ ಹುಡುಕಾಟ ಇದ್ದೇ ಇರುತ್ತದೆ. ಬೇರೆ ಬೇರೆ ಸ್ವರೂಪದಲ್ಲಿ, ಭಿನ್ನ ಭಿನ್ನ ನೆಲೆಗಳಲ್ಲಿ. ■

# ‘ಇತಿಹಾಸ ದರ್ಪಣ’ಕ್ಕೆ ಪ್ರಬಂಧವನ್ನು ಕಳುಹಿಸುವ ಮುನ್ನ...

‘ಇತಿಹಾಸ ದರ್ಪಣ’ಕ್ಕೆ ಸಂಶೋಧನ ಪ್ರಬಂಧವನ್ನು ಕಳುಹಿಸುವವರು ಈ ಕೆಳಕಂಡ ಕ್ರಮಗಳನ್ನು ಪಾಲಿಸಬೇಕು.

- ಪ್ರಬಂಧವು ಅಪ್ರಕಟಿತವಾಗಿರಬೇಕು ಮತ್ತು ನವ ಶೋಧನೆ, ವಿನೂತನ ವಿಶ್ಲೇಷಣೆ, ಆಲೋಚನೆ ಹಾಗೂ ಸಂಶೋಧನಾ ವಿಧಾನಗಳಿಂದಾಗಿ ಹೊಸತನದಿಂದ ಕೂಡಿದ ಮತ್ತು ಚರಿತ್ರೆಯ ಅಧ್ಯಯನದ ಮೇಲೆ ಹೊಸ ಬೆಳಕು ಚೆಲ್ಲುವ ಪ್ರಬಂಧವಾಗಿರಬೇಕು.
- ಪ್ರಬಂಧವನ್ನು ‘ನುಡಿ’ ತಂತ್ರಾಂಶದಲ್ಲಿ ಬೆರಳಚ್ಚು ಮಾಡಿ ಇ-ಮೇಲ್ ಮಾಡುವುದು ಹೆಚ್ಚು ಸೂಕ್ತವಾಗಿರುತ್ತದೆ. ಉಲ್ಲೇಖದ ಟಿಪ್ಪಣಿಗಳನ್ನು ಉಲ್ಲೇಖ, ಹೆಚ್ಚಿನ ಮಾಹಿತಿ ಹಾಗೂ ಅಗತ್ಯ ವಿವರಣೆಗಳನ್ನು ಕೊನೆ ಟಿಪ್ಪಣಿಗಳ ರೂಪದಲ್ಲಿ ನೀಡಬೇಕು.
- ಕೊನೆ ಟಿಪ್ಪಣಿಗಳನ್ನು ನೀಡುವಾಗ ಲೇಖಕರ ಹೆಸರು, ಪ್ರಕಟಣಾ ವರ್ಷ, ಕೃತಿಯ ಶೀರ್ಷಿಕೆ (ಇಟ್ಯಾಲಿಕ್‌ನಲ್ಲಿ), ಸ್ಥಳ, ಪ್ರಕಾಶಕರು ಮತ್ತು ಪುಟಗಳ ವಿವರಗಳನ್ನು ಮೊದಲ ಬಾರಿ ನೀಡಬೇಕು. ಪುನರುಕ್ತಗೊಳ್ಳುವಾಗ ಲೇಖಕರ ಹೆಸರು, ವರ್ಷ ಬರೆದು ‘ಪೂರ್ವೋಕ್ತ’ ಎಂದು ಕೃತಿಯ ಹೆಸರ ಸ್ಥಳದಲ್ಲಿ ನಮೂದಿಸಿ ಪುಟಗಳ ಸಂಖ್ಯೆ ಸೂಚಿಸಬೇಕು. ತತ್ಕೂಡಲೇ ಉಲ್ಲೇಖಿಸುವ ಸಂದರ್ಭದಲ್ಲಿ ‘ಇಲ್ಲೇ’ ಎಂದು ನಮೂದಿಸಿ ಪುಟಗಳ ಸಂಖ್ಯೆ ಸೂಚಿಸಬೇಕು.
- ಲೇಖನಗಳನ್ನು ಉಲ್ಲೇಖಿಸುವಾಗ– ಲೇಖಕನ ಹೆಸರು, ಪ್ರಕಟಣಾ ವರ್ಷ, ಲೇಖನದ ಶೀರ್ಷಿಕೆ (‘ ’ ಈ ಚಿಹ್ನೆಯಲ್ಲಿ ಕೊಡುವುದು), ಈ ಲೇಖನ ಪ್ರಕಟವಾದ ನಿಯತಕಾಲಿಕೆ ಹೆಸರು (ಇಟ್ಯಾಲಿಕ್‌ನಲ್ಲಿ), ಸಂಚಿಕೆ, ಸಂಪುಟ, ವರ್ಷ, ಪ್ರಕಟವಾಗುತ್ತಿರುವ ಸ್ಥಳ ಮತ್ತು ಪುಟಗಳ ವಿವರ ಸೂಚಿಸುವುದು.
- ಸಂಪಾದಿತ ಕೃತಿಯಲ್ಲಿನ ಲೇಖನವನ್ನು ಉಲ್ಲೇಖಿಸುವಾಗ– ಲೇಖಕನ ಹೆಸರು, ಪ್ರಕಟಣಾ ವರ್ಷ, ಲೇಖನದ ಶೀರ್ಷಿಕೆ (‘ ’), ಸಂಪಾದಕರ ಹೆಸರು, ಕೃತಿಯ ಶೀರ್ಷಿಕೆ (ಇಟ್ಯಾಲಿಕನಲ್ಲಿ), ಸ್ಥಳ, ಪ್ರಕಾಶಕರು, ಪುಟಗಳ ವಿವರ ಸೂಚಿಸುವುದು.
- ಪ್ರಬಂಧಕ್ಕೆ ಪೂರಕವಾದ ಚಿತ್ರಗಳನ್ನು ಕಳುಹಿಸಿಕೊಡಬಹುದು. ಅವುಗಳಿಗೆ ಕಡ್ಡಾಯವಾಗಿ ಚಿತ್ರ ಶೀರ್ಷಿಕೆಗಳನ್ನು ನೀಡಿರಬೇಕು.
- ಇತಿಹಾಸ ದರ್ಪಣ ಚಂದಾದಾರರಾಗಿರುವವರಿಗೆ ಮೊದಲ ಆದ್ಯತೆ.
- ಪ್ರಕಟಣೆಗೆ ಬರುವ ಪ್ರಬಂಧಗಳನ್ನು ಪೂರ್ವಾವಲೋಕನಕ್ಕಾಗಿ ತಜ್ಞರಿಗೆ ಕಳುಹಿಸಿ ಕೊಡಲಾಗುವುದು. ಆಯ್ಕೆಯಾದ ಪ್ರಬಂಧಗಳನ್ನು ಪ್ರಕಟಣಾ ಪೂರ್ವದಲ್ಲಿಯೇ ಲೇಖಕರಿಗೆ ತಿಳಿಸಲಾಗುವುದು.
- ಪ್ರಕಟವಾದ ಪ್ರಬಂಧಗಳಿಗೆ ಯಾವುದೇ ಸಂಭಾವನೆಯನ್ನು ನೀಡಲಾಗುವುದಿಲ್ಲ ಮತ್ತು ತಾವು ಕಳುಹಿಸಿಕೊಟ್ಟ ಲೇಖನ ಸಂಬಂಧ ಯಾವುದೇ ಪತ್ರ ವ್ಯವಹಾರ ಮತ್ತು ದೂರವಾಣಿ ಸಂಭಾಷಣೆಗೆ ಅವಕಾಶವಿರುವುದಿಲ್ಲ.
- ಪ್ರಬಂಧಗಳನ್ನು ‘itihasadarpana@gmail.com’ಗೆ ಇ-ಮೇಲ್ ಮಾಡುವುದು.

–ಸಂಪಾದಕರು

# ಗುಲ್ಬರ್ಗ*ಜಿಲ್ಲೆಯ ಕಲ್ಯಾಣ ಚಾಲುಕ್ಯರ ಕಾಲದ ಶೈಕ್ಷಣಿಕ ವ್ಯವಸ್ಥೆ

□ ಅರ್ಚನಾ. ಸಿದ್ರಾಮಪ್ಪ
ಮ.ನಂ.6-815, ಮೊಮಿನ್‌ಪುರ,
ರಂಗೀನ್ ಮಸೀದಿ, ಹಿಂದುಗಡೆ,
ಕಲಬುರ್ಗಿ-585104.

ಗುಲ್ಬರ್ಗ ಉತ್ತರ ಕರ್ನಾಟಕದ ಒಂದು ಪ್ರಮುಖ ಜಿಲ್ಲೆ. ಪ್ರಸ್ತುತ ಜಿಲ್ಲೆಯ ಉತ್ತರಕ್ಕೆ ಬೀದರ್ ಹಾಗೂ ಮಹಾರಾಷ್ಟ್ರದ ಉಸ್ಮಾನಾಬಾದ ಜಿಲ್ಲೆಗಳಿವೆ. ಪೂರ್ವಕ್ಕೆ ಆಂಧ್ರಪ್ರದೇಶದ ಮೇಡಕ್ ಮತ್ತು ಮೆಹಬೂಬನಗರ ಜಿಲ್ಲೆಗಳಿವೆ. ಪಶ್ಚಿಮಕ್ಕೆ ವಿಜಾಪುರ ಜಿಲ್ಲೆ, ದಕ್ಷಿಣಕ್ಕೆ ರಾಯಚೂರು ಜಿಲ್ಲೆಗಳಿವೆ. ಈ ಜಿಲ್ಲೆಯು ವಿಶಿಷ್ಟವಾದ ಭೌಗೋಳಿಕ ಪರಿಸರವನ್ನೊಳಗೊಂಡಿದೆ. ಇಲ್ಲಿ ಬಸಾಲ್ಟ ಕಲ್ಲು, ಸುಣ್ಣದ ಕಲ್ಲು, ಜಂಬಿಟ್ಟಿಗೆ ಮಣ್ಣು, ಕರಿಮಣ್ಣು ದೊರೆಯುವುದು. ಖನಿಜ ಸಂಪತ್ತಿನಿಂದ ಸಂಮೃದ್ಧವಾದ ಈ ಜಿಲ್ಲೆಯಲ್ಲಿ ತಾಮ್ರ, ಕಬ್ಬಿಣದ ನಿಕ್ಷೇಪಗಳು ದೊರಕಿವೆ. ಜಿಲ್ಲೆಯಲ್ಲಿ ಭೀಮಾ, ಕೃಷ್ಣಾ ಹಾಗೂ ಕಾಗಿಣಾ ನದಿಗಳು ಹರಿಯುತ್ತವೆ. ಅಂದೋಲಾ, ಮಲ್ಲಾಬಾದ, ಪೇಠಶಿರುರು, ಇಜೇರಿ ಇತ್ಯಾದಿ ಗ್ರಾಮಗಳಲ್ಲಿ ಚರಿತ್ರೆ ಪೂರ್ವ ಕಾಲದ ಅವಶೇಷಗಳು ದೊರೆತಿವೆ.[1]

ಗುಲ್ಬರ್ಗ ಜಿಲ್ಲೆಯು ಸುಮಾರು ಕ್ರಿ.ಪೂ.2ನೇ ಶತಮಾನದಷ್ಟು ಹಳೆಯದಾದ ಇತಿಹಾಸವನ್ನೊಳಗೊಂಡಿದೆ. ಸನ್ನತಿಯಲ್ಲಿ ದೊರೆತ ಅಶೋಕನ ಶಾಸನಗಳು (ಮೌರ್ಯರು) ಹಾಗೂ ಶಾತವಾಹನರ ಶಾಸನಗಳು ಇದಕ್ಕೆ ಸಾಕ್ಷಿಗಳಾಗಿವೆ. ತದನಂತರ ಬಾದಾಮಿ ಚಾಲುಕ್ಯರು ಈ ಭಾಗವನ್ನಾಳಿದರು. ರಾಷ್ಟ್ರಕೂಟರು ಇಲ್ಲಿನ ಮಳಖೇಡನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿ ಸುಮಾರು ವರ್ಷಗಳವರೆಗೆ ಆಳ್ವಿಕೆ ನಡೆಸಿದರು. ನಂತರ ಕಲ್ಯಾಣದ ಚಾಲುಕ್ಯರು ಈ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದರು. ಇವರ ಕಾಲದ ಶಾಸನಗಳನ್ನು ಪ್ರಮುಖ ಆಕರವಾಗಿಟ್ಟುಕೊಂಡು ಶೈಕ್ಷಣಿಕ ಅಂಶಗಳನ್ನು ಪರಿಚಯಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಿದ್ದೇನೆ.

* ಈ ಲೇಖನ ಪ್ರಕಟಣೆಗೆ ಬಂದಾಗ ಕಲಬುರ್ಗಿಯ ಹೆಸರು ಗುಲ್ಬರ್ಗವಾಗಿಯೇ ಇತ್ತು. ಆದ್ದರಿಂದ ಅದೇ ಹೆಸರನ್ನು ಹಾಗೆಯೇ ಬಳಸಿದೆ. -ಸಂ.

ಗುಲ್ಬರ್ಗ ಜಿಲ್ಲೆಯ ಕಲ್ಯಾಣ ಚಾಲುಕ್ಯರ ಶಾಸನಗಳನ್ನು ಗಮನಿಸಿದಾಗ ಅಂದು ಗುಲ್ಬರ್ಗ ಜಿಲ್ಲೆಯು ಶೈಕ್ಷಣಿಕವಾಗಿ ಮುಂದುವರೆದ ನಾಡಾಗಿತ್ತು. ಇಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಶೈಕ್ಷಣಿಕ ಕೇಂದ್ರಗಳಿದ್ದವು. ಇವುಗಳಲ್ಲಿ ಬಹುತೇಕವಾಗಿ ಅಗ್ರಹಾರಗಳು, ಮಠಗಳು ಮತ್ತು ಘಟಿಕಾಸ್ಥಾನಗಳು ಕಂಡುಬರುತ್ತವೆ.

ಶೈಕ್ಷಣಿಕ ಕೇಂದ್ರಗಳು

ಅಗ್ರಹಾರಗಳು : ಅಗ್ರಹಾರ ಎಂದರೆ ಶ್ರೇಷ್ಠ, ಆಹಾರ ಎಂದರೆ ಸ್ಥಳ ಅಥವಾ ಊರು. ಆದ್ದರಿಂದ ಅಗ್ರಹಾರವೆಂದರೆ ಬ್ರಾಹ್ಮಣರ ಸ್ಥಳ. ಅಗ್ರಹಾರಗಳಲ್ಲಿನ ಬ್ರಾಹ್ಮಣರು ಮಹಾಜನರು. ಇವರು ವೇದ ಪಾರಂಗತರಾಗಿ, ವಿದ್ಯಾರ್ಥಿಗಳಿಗೆ ಬೋಧನೆ ಮಾಡುತಿದ್ದರು. ಪ್ರಸ್ತುತ ಗುಲ್ಬರ್ಗ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಅಗ್ರಹಾರಗಳು ಹೀಗಿವೆ: ಇಜೇರಿ,[2] ಸೇಡಂ,[3] ಅವರಾದ,[4] ದಿಗ್ಗಾಂವಿ,[5] ನಾಗಾವಿ,[6] ಗೊಬ್ಬುರು,[7] ಇಂಗಳಗಿ,[8] ಗಂವ್ಹಾರ,[9] ಅರಳಗುಂಡಗಿ,[10] ನಿಪ್ಪಾಣಿ,[11] ಪೇಠಶಿರೂರ,[12] ಅಂಕಲಗಿ,[13] ವಡಗೇರಿ,[14] ರುದ್ರವಾಡಿ,[15] ಕುಳಗೇರಿ[16] ಮುಂತಾದವು.



ಹಂದರ್ಕಿಯ ಅಗ್ರಹಾರ ಸೇಡಮ್ ತಾಲ್ಲೂಕು

ದಿಗ್ಗಾಂವಿ ಶಾಸನವು ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದೆ. ರಾಣಿ ಮಲೇಯಮತಿದೇವಿ ದಿಗ್ಗಾಂವಿ ಅಗ್ರಹಾರದ ಮೇಲ್ವಿಚಾರಕಳಾಗಿ ಕಾರ್ಯನಿರ್ವಹಿಸುತ್ತಿದ್ದಳು.

ಇದರ ಶ್ರೇಯೋಭಿವೃದ್ಧಿಗಾಗಿ ಬಮ್ಮಯ್ಯರಸ ಹಾಗೂ ಇತರರು ಧಾರ್ಮಿಕ ಶಿಕ್ಷಣಕ್ಕಾಗಿ 300 ಮತ್ತರು ಹೊಲ, 6 ಮತ್ತರು ತೋಟ, 6 ನಿವೇಶನ ಮತ್ತು 2 ಗಾಣಗಳು ದಾನ ಕೊಟ್ಟ ವಿಷಯವನ್ನು ತಿಳಿಸುತ್ತವೆ.[17] ಸೇಡಂನ ಕಲ್ಯಾಣ ಚಾಲುಕ್ಯರ ಶಾಸನಗಳು 'ಅಗ್ರಹಾರ ಸೇಡಂಬಾಪುರ' ಎಂದು ಹೇಳಿದೆ. ಕಾಳಿದಾಸ ದಂಡನಾಯಕನ ಅಳಿಯ ಭೀಮಚಮೂಪ ಹಾಗೂ 300 ಮಹಾರಾಜರು ಅಗ್ರಹಾರದ ಶ್ರೇಯೋಭಿವೃದ್ಧಿಗಾಗಿ 45 ಮತ್ತರು ಭೂಮಿ, 2 ಮತ್ತರು ಕೇದಗಿಯ ತೋಟಗಳನ್ನು ದಾನ ಕೊಟ್ಟ ಸಂದರ್ಭದಲ್ಲಿ ನಾನಾ ದೇಶಿ ಮುಮ್ಮರಿ ದಂಡಗಳು ವಿವಿಧ ವಸ್ತುಗಳ ಮೇಲಿನ ಆಯವನ್ನು ದಾನ ಬಿಟ್ಟ ವಿಷಯ ತಿಳಿಯುವುದು.[18] ಸುಲೇಪೇಟೆಯ ಈಶ್ವರ ದೇವಾಲಯದ ಎರಡು ಶಾಸನಗಳು ಸುಲೇಪೇಟೆಯು ಅಗ್ರಹಾರವಾಗಿತ್ತೆಂದು ತಿಳಿಸುತ್ತವೆ.[19] ಅಂಕಲಗಿಯ ಕ್ರಿ.ಶ.1077ರ ಶಾಸನವು ಶಂಕರ ಮತ್ತು ತ್ರಿಮೂರ್ತಿ ದೇವರ ದೇವಾಲಯದಲ್ಲಿ ಅಗ್ರಹಾರವಿತ್ತೆಂದು ತಿಳಿಸುತ್ತದೆ. ಇದರ ಅಭಿವೃದ್ಧಿಗಾಗಿ ಹೊಲ, ತೋಟ, ಗಾಣ ವಿವಿಧ ವಸ್ತುಗಳ ಸುಂಕ ಹಾಗೂ ಭೂದಾನವನ್ನು ಕೊಡಲಾಗಿತ್ತು.[20] ಚಿತ್ತಾಪುರದ ನಾಗಾಯಿ(ಕೆ) ಗ್ರಾಮದ 60 ಕಂಬದ ದೇವಾಲಯದಲ್ಲಿರುವ ಕ್ರಿ.ಶ.1058ರ ಶಾಸನವು ನಾಗಾಯಿಯು ಅಗ್ರಹಾರವಾಗಿತ್ತೆಂದು ತಿಳಿಸುತ್ತದೆ.[21] ಇದೇ ಚಿತ್ತಾಪುರ ತಾಲ್ಲೂಕಿನ ನಿಪ್ಪಾಣಿಯ ಕ್ರಿ.ಶ.1037ರ ಶಾಸನವು ಸರಸ್ವತಿ ದೇವಾಲಯದ ವಿದ್ಯಾರ್ಥಿಗಳ ಊಟ ವಸತಿಗಳಿಗೆಂದು ಭೂದಾನ ಕೊಟ್ಟ ಅಂಶವನ್ನು ತಿಳಿಸುತ್ತದೆ.[22] ಪೇಠಶಿರುರ ಗ್ರಾಮದ ರಬ್ಜೇಶ್ವರ ದೇವಾಲಯದಲ್ಲಿನ ವಿದ್ಯಾರ್ಥಿಗಳಿಗೆ ಗದ್ದೆ, ತೋಟ, ಗಾಣ, ಎಲೆ, ಅಡಿಕೆ, ಭತ್ತಗಳನ್ನು ದಾನ ಕೊಡಲಾಗಿತ್ತೆಂದು ಕ್ರಿ.ಶ.1117ರ ಶಾಸನವು ತಿಳಿಸುತ್ತದೆ.[23] ಜೇವರ್ಗಿಯ ಇಜೇರಿ ಗ್ರಾಮದ ಶಂಕರನಾರಾಯಣ ದೇವರ ಮಠದ ವಿದ್ಯಾರ್ಥಿಗಳ ಊಟ, ವಸತಿಗಳಿಗೆಂದು ಹೊಲ ತೋಟ, ನಿವೇಶನ, ಗಾಣವನ್ನು ದಾನ ಬಿಟ್ಟ ವಿಷಯವನ್ನು ಶಾಸನವು ತಿಳಿಸುತ್ತದೆ.[24]

ಬಂದರವಾಡಾದ ಸೋಮೇಶ್ವರ ದೇವಾಲಯಗ ಅಗ್ರಹಾರಕ್ಕೆ 12 ಮತ್ತರು ಭೂಮಿಯನ್ನು ಮಹಾಜನರು, ಹಾಗೂ ಇತರ ಅಧಿಕಾರಿಗಳು ವಿವಿಧ ಸುಂಕಗಳನ್ನು ದಾನ ನೀಡಿದ ವಿಷಯವನ್ನು ಕ್ರಿ.ಶ.1113ರ ಶಾಸನವು ತಿಳಿಸುತ್ತದೆ.[25] ಗಂವ್ಹಾರದ ಅಮೃತೇಶ್ವರ ದೇವಾಲಯದ ಶಾಸನವು ಇದೊಂದು ಅಗ್ರಹಾರವಾಗಿತ್ತೆಂದು ತಿಳಿಸುತ್ತದೆ.[26] ತೆಂಗಳಿಯ ಮಲ್ಲಿಕಾರ್ಜುನ ದೇವಾಲಯದ ಶಾಸನವು ಐದು ಶೂನ್ಯ ಗ್ರಾಮಗಳನ್ನು ಬ್ರಾಹ್ಮಣರಿಗೆ ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ.[27] ದಿಗ್ಗಾಂವಿಯ ಶಂಭುಲಿಂಗ ದೇವಾಲಯದ ಅಗ್ರಹಾರಕ್ಕೆ 40 ಮತ್ತರು ಹೊಲ, ಹೂದೋಟ ಹಾಗೂ ನಿವೇಶನವನ್ನು ದಾನಬಿಟ್ಟ ಅಂಶವನ್ನು ಅಲ್ಲಿನ ಶಾಸನ ತಿಳಿಸುತ್ತದೆ.[28] ನಾಗಾಯಿಯ ಕ್ರಿ.ಶ.1054ರ ಶಾಸನವು ನಾಗಾಯಿ ಅಗ್ರಹಾರದ ಬಗ್ಗೆ ತಿಳಿಸುತ್ತದೆ.[29]

ಮಠಗಳು : ವಿದ್ಯಾದಾನದ ಕೇಂದ್ರಗಳಾದ ಮಠಗಳು ಬಡವರು, ಅನಾಥರು, ರೋಗಿಗಳು, ಭಿಕ್ಷುಕರಿಗೆ ಹಾಗೂ ಪ್ರವಾಸಿಗಳಿಗೆ ಅನ್ನದಾನ ಮಾಡುವ ಸ್ಥಳಗಳಾಗಿವೆ. 12ನೇ ಶತಮಾನದ ನಂತರ ಮಠಗಳು ಸಾರ್ವತ್ರಿಕ ಶಿಕ್ಷಣವನ್ನು ನೀಡಿದ್ದು ಒಂದು ವಿಶೇಷತೆ. ಮಠಗಳಲ್ಲಿ ಪ್ರಮುಖವಾಗಿ 3 ವಿಧಗಳಿವೆ, ಅವುಗಳೆಂದರೆ : ವಿರಕ್ತ ಮಠಗಳು– ಸನ್ಯಾಸಿಗಳು ವಾಸಿಸುವ ಮಠಗಳಾಗಿವೆ. ಓದಿಸುವ ಮಠಗಳು–ಬೋಧಿಸುವ ಮಠಗಳಾಗಿವೆ. ಶಾಲೀ/ಸಾಲಿ ಮಠಗಳು–ಧಾರ್ಮಿಕ ಶಿಕ್ಷಣದ ಜೊತೆಗೆ ವೃತ್ತಿ ಶಿಕ್ಷಣ ಹೇಳುವುದು.

ನಾಗಾವಿ(ಯ) ಗ್ರಾಮದ ಮಧುಸೂಧನಾಲಯ ದೇವಾಲಯದ ಮಠದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ವೇದಾಂಗಗಳು, ನೃತ್ಯವನ್ನು ಬೋಧಿಸಲಾಗುತ್ತಿತ್ತು. ಇಲ್ಲಿ ಏಕದಂಡಿ, ತ್ರಿದಂಡಿ, ವಿರಕ್ತಿಗಳು ಸ್ನಾತಕವನ್ನು ಪಡೆದಿದ್ದರು.[30] ನಿಪ್ಪಾಣಿಯ ಕ್ರಿ.ಶ.1037ರ ಶಾಸನವು ಸರಸ್ವತಿ ಮಂಟಪವನ್ನು ಉಲ್ಲೇಖಿಸಿ ಮಠಕ್ಕೆ 300 ಮತ್ತರು ಭೂಮಿಯನ್ನು, ಎರಡು ತೋಟಗಳನ್ನು ದಾನ ಬಿಟ್ಟ ವಿಷಯ ತಿಳಿಸುತ್ತದೆ.[31] ಆಳಂದದ ಸೋಮನಾಥ ದೇವಾಲಯಕ್ಕೆ ಸೇರಿದ ವಸತಿ ಶಾಲೆಯಲ್ಲಿ ಕನ್ನಡ ಮತ್ತು ಇತರ ಶಾಸ್ತ್ರಗಳನ್ನು ಬೋಧನೆ ಮಾಡುತ್ತಿದ್ದರು.[32] ಕ್ರಿ.ಶ.1094ರ ನಾಗಾವಿ ಶಾಸನವು ಸಿದ್ದೇಶ್ವರ ದೇವಾಲಯಕ್ಕೆ ಸೇರಿದ ಶ್ರೀ ಸಿದ್ದೇಶ್ವರ ಮಠ ದೇವರಗಣದ ಬಗ್ಗೆ ತಿಳಿಸುತ್ತದೆ.[33] ಕ್ರಿ.ಶ.1086ರ ಶಾಸನವು ಶ್ರೀಮಧುಸೂಧನ, ತ್ರೈಪುರುಷ, ಸಿದ್ದೇಶ್ವರ ದೇವಾಲಯಗಳಲ್ಲಿ ಸಂಜೆಯ ಮಠವಿತ್ತೆ? ಎಂಬುದು ಖಚಿತವಾಗಿ ತಿಳಿದು ಬಂದಿಲ್ಲ. ಮಠಗಳಲ್ಲಿನ ವಿದ್ಯಾರ್ಥಿಗಳು ಬ್ರಹ್ಮಚರ್ಯವನ್ನು ಪಾಲಿಸುವುದು ಕಡ್ಡಾಯವಾಗಿತ್ತು. ಜಗಳವಾಡುವ, ಪರಸ್ಪರ ನಿಂದಿಸುವ, ಕಠಾರಿಯನ್ನು ಕೈಗೆ ತೆಗೆದುಕೊಳ್ಳುವಂತವರನ್ನು ಕಠಿಣವಾಗಿ ಶಿಕ್ಷಿಸುತ್ತಿದ್ದರು.[34] ಅಂದೋಲಾದಲ್ಲಿ ಚೆನ್ನಮಾಧವದೇವರ ಪಂಚಮಠವಿತ್ತು.[35] ಇಂಗಳಗಿಯ ಲೋಕೇಶ್ವರ ದೇವಾಲಯದ ಮಠದಾಚಾರ್ಯ ರುದ್ರಶಕ್ತಿಜೀಯರು ಆಗಿದ್ದರು.[36] ಹುಣಸಿಪಡಗಿಲೆಯಲ್ಲಿ ಜೈನಮಠವಿತ್ತು. ಅಲ್ಲಿನ ಪಯೋರಾಸಿ ಪಂಡಿತ ರಕ್ಕಸ ಎನಿಸಿದ್ದರು.[37]

**ಘಟಿಕಾ ಸ್ಥಾನ :** 'ಘಟಿಕಾ' ಎಂಬ ಪದಕ್ಕೆ ಮಣ್ಣಿನ ಪಾತ್ರೆ, ಕಾಲಗಣನೆಗೆ ಬಳಸುವ ಮಣ್ಣಿನ ಅಥವಾ ತಾಮ್ರದ ಪಾತ್ರೆ, 24 ಘಂಟೆಗಳ ಕಾಲದ ಅವಧಿಗಳೆಂದು ಅರ್ಥವಿದೆ.[38]

ಪ್ರಾಚೀನ ಕರ್ನಾಟಕದ ಪ್ರಮುಖವಾದ ಘಟಿಕಾಸ್ಥಾನಗಳೆಂದರೆ ನಾಗಾವಿ, ಹೆಂಜೇರು, ಹೂವಿನ ಬಾಗೆ ಮುಂತಾದವು. ಚಿತ್ತಾಪುರದ ನಾಗಾವಿಯು ಶಾಸನಗಳಲ್ಲಿ 'ಅಗ್ರಹಾರ



ನಾಗಾವಿಯ ಘಟಿಕಾಸ್ಥಾನ, ಚಿತ್ತಾಪುರ ತಾಲ್ಲೂಕು

ನಾಗಾವಿ', 'ಮಹಾ ಅಗ್ರಹಾರ ನಾಗವಾವಿ.' 'ಸರ್ವನಸ್ಯದ ಅಗ್ರಹಾರ ನಾಗವಾವಿ' ಎಂಬ ಉಲ್ಲೇಖಗಳಿವೆ. ಇದೊಂದು ಘಟಿಕಾಸ್ಥಾನವೆನಿಸಿಕೊಂಡಿದೆ. ಇಲ್ಲಿ ಪದವಿ ಹಾಗೂ ಸ್ನಾತಕ ಪದವಿ ನೀಡಿದ ಬಗ್ಗೆ ಉಲ್ಲೇಖವಿದೆ. ಕಾಳಿದಾಸ ದಂಡನಾಯಕನು ಚಾಲುಕ್ಯ ಅರಸ ಪರಮೇಶ್ವರನಿಂದ ದತ್ತಿಯಾಗಿ ಪಡೆದ ಮಹಾ ಅಗ್ರಹಾರ ನಾಗಾವಿಯಾಗಿದೆ. ಅರಲು-300ಕ್ಕೆ ಸೇರಿದ ನಾಗಾವಿ ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಶಿಲ್ಪಕಲೆಯ ಕೇಂದ್ರವಾಗಿತ್ತು. ತ್ರೈಪುರುಷ ಶಾಲೆ, ಮಧುಸೂದನಾಲಯ, ರಾಮೇಶ್ವರಾಲಯ ಹಾಗೂ ರಾಮತೀರ್ಥಗಳನ್ನು ನಿರ್ಮಿಸಿದರ ಪರಿಣಾಮವಾಗಿ ಘಟಿಕಾಸ್ಥಾನವೆನಿಸಿಕೊಂಡಿದೆ. ಇಲ್ಲಿ 200 ವೇದಾಧ್ಯಾಯಿಗಳು, 50 ಜನ ಶಾಸ್ತ್ರ ಓದುವ ವಿದ್ಯಾರ್ಥಿಗಳು, 6 ಜನ ಶಿಕ್ಷಕರು, ಒಬ್ಬ ಸರಸ್ವತಿ ಭಂಡಾರಿ ಹೀಗೆ ಒಟ್ಟು 257 ಜನರಿದ್ದರು. ಹಾಗೂ ವಿದ್ಯಾರ್ಥಿಗಳು, ಶಿಕ್ಷಕರಿಗೆ ಉಚಿತ ಊಟ, ವಸತಿ ಸೌಲಭ್ಯವಿತ್ತು. ಇದು ವೇದಶಾಸ್ತ್ರಾಧ್ಯಯನದ ಘಟಿಕಾಸ್ಥಾನ ಹಾಗೂ 400 ಮಹಾಜನರನ್ನು ಹೊಂದಿದ ಮಹಾ ಅಗ್ರಹಾರವಾಗಿತ್ತು.[39]

**ತ್ರೈಪುರುಷ ದೇವಾಲಯ :** ತ್ರೈಪುರುಷ ದೇವಾಲಯದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರನ ವಿಗ್ರಹಗಳಿರುತ್ತವೆ. ಕೆಲವೊಂದು ಸಲ ಬ್ರಹ್ಮನ ಬದಲಾಗಿ ಸೂರ್ಯನನ್ನು ಪೂಜಿಸಲಾಗುತ್ತದೆ. ಸಾಮಾನ್ಯವಾಗಿ ತ್ರೈಪುರುಷ ದೇವಾಲಯಗಳು ಅಗ್ರಹಾರಗಳು ಹಾಗೂ ಶಾಲೆಗಳೊಂದಿಗೆ ಹೊಂದಿಕೊಂಡಿರುತ್ತವೆ. ನಾಗಾವಿ ಗ್ರಾಮದ ಕ್ರಿ.ಶ.1058ರ ಶಾಸನವು ಇಲ್ಲಿ ತ್ರೈಪುರಷ ಶಾಲೆ ಇತ್ತೆಂದು ಉಲ್ಲೇಖಿಸಿದೆ.[40] ಆದರೆ ಪ್ರಸ್ತುತವಾಗಿ ಈ ದೇವಾಲಯದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರನ ವಿಗ್ರಹಗಳಿಲ್ಲ.

ಅಗ್ರಹಾರ ಮಾಶಾಳದಲ್ಲಿ ಯುವರಾಜ ಮಲ್ಲಿಕಾರ್ಜುನರ ಮನೆವೆರ್ಗಡೆಯ ದಂಡನಾಯಕ ಗೋವಿಂದಯ್ಯರು ಮಾಡಿಸಿದ ಮಹಾದೇವರ, ಶ್ರೀಕೇಶವ ದೇವರ, ಆದಿತ್ಯದೇವರ ತ್ರಿಕೂಟ ದೇವಾಲಯವು ಹಲವಾರು ಪರಿಚಾರಕ ವರ್ಗದವರನ್ನು ಹೊಂದಿತ್ತು.[41]



ಮಾಶಾಳದ ತ್ರೈಪುರುಷ ದೇವಾಲಯ, ಅಫ್ಜಲಪುರ ತಾಲ್ಲೂಕು

**ಸರಸ್ವತಿ ಮಂಟಪ :** ಸರಸ್ವತಿ ಮಂಟಪ ಅಥವಾ ದೇವಾಲಯಗಳಲ್ಲಿ ವಿದ್ಯಾದಾನ ಮಾಡಲಾಗುತ್ತಿತ್ತು. ಇಂತಹ ಒಂದು ಸರಸ್ವತಿ ಮಂಟಪ ನಿಪ್ಪಾಣಿ ಗ್ರಾಮದಲ್ಲಿದೆ. ಕ್ರಿ.ಶ.1037ರ ಶಾಸನವು ಕಲ್ಯಾಣ ಚಾಲುಕ್ಯ ಅರಸ ಜಗದೇಕ ಮಲ್ಲನ ಕಾಲಕ್ಕೆ ಸೇರಿದೆ. ಈತನ ರಾಣಿ ಸೋಮಲಾದೇವಿ ನಿಪ್ಪಾಣಿಯನ್ನು ಆಳುತ್ತಿದ್ದಾಗ ಕ್ರಿ.ಶ.1037ರಲ್ಲಿ ಸರಸ್ವತಿ ದೇವಿಯನ್ನು ಪ್ರತಿಷ್ಠಾಪಿಸಿ ದೇವಿಯ ಆರಾಧನೆಗೆ ಮತ್ತು ಅಲ್ಲಿಯ ವಿದ್ಯಾರ್ಥಿಗಳ ಊಟ, ವಸತಿಗಳಿಗೆಂದು ಭೂದಾನ ಬಿಟ್ಟ ವಿಷಯವನ್ನು ಈ ಶಾಸನವು ತಿಳಿಸುತ್ತದೆ. ಪ್ರಸ್ತುತ ಮಂಟಪವು ಮಲ್ಲಿಕಾರ್ಜುನ ದೇವಾಲಯಕ್ಕೆ ಹೊಂದಿಕೊಂಡಿತ್ತು.[42]

**ಅಧ್ಯಯನದ ವಿಷಯಗಳು :** ಗುಲ್ಬರ್ಗ ಜಿಲ್ಲೆಯ ಕಲ್ಯಾಣ ಚಾಲುಕ್ಯರ ಶಾಸನಗಳಲ್ಲಿ ಅಂದು ಅಧ್ಯಯನ ಮಾಡುವ ವಿಷಯಗಳ ಬಗ್ಗೆ ಉಲ್ಲೇಖಿಸಲಾಗಿದೆ. ಅವುಗಳು ಹೀಗಿವೆ: ನ್ಯಾಯ, ವೈಶೇಷಿಕ,[43] ಗೀತ, ವಾದ್ಯ, ನೃತ್ಯ[44] ವಿಷವಿದ್ಯೆ,[45] ಋಗ್ವೇದ, ಯಜು, ಸಾಮವೇದ, ಸ್ತೋತ್ರ, ಪುರಾಣ,[46] ಇತ್ಯಾದಿ.

**ಉಪಾಧ್ಯಾಯರು :** ಆರಂಭದಲ್ಲಿ ಬ್ರಾಹ್ಮಣ ಪಂಡಿತರು ಬೋಧನೆ ಮಾಡುತ್ತಿದ್ದರು. ತದನಂತರ ಕಾಳಾಮುಖ ಸ್ಥಾನಿಕರು, ಜಿನಮುಖಿಗಳು ಉಪಾಧ್ಯಾಯ ವೃತ್ತಿಯನ್ನು ಮಾಡಲಾರಂಭಿಸಿದರು. ಶಾಸನಗಳು ಇವರನ್ನು ಭಟ್ಟೋಪಾಧ್ಯಾಯರು, ಆಚಾರ್ಯರು, ಪಂಡಿತರು ಎಂದು ಹೆಸರಿಸಿವೆ. ಅಂತಹ ಶಾಸನೋಕ್ತ ಪಂಡಿತರ ಹೆಸರು ಹೀಗಿವೆ: ಸದ್ಯೋಜಾತ ಪಂಡಿತರು,[47] ಮಲ್ಲಿಕಾರ್ಜುನ ಪಂಡಿತರು,[48] ರುದ್ರಶಕ್ತಿ ಜೀಯರು,[49] ಜಿನಚಂದ್ರದೇವ,[50] ಸಿದ್ಧಾಂತದೇವರು,[51] ಶಂಕರಭಟೋಪಾಧ್ಯಾಯರು,[52] ಸುರೇಶ್ವರ ಪಂಡಿತರು[53] ಇತ್ಯಾದಿ.

**ಸ್ತ್ರೀಯರ ಶಿಕ್ಷಣ :** ಗುಲ್ಬರ್ಗ ಜಿಲ್ಲೆಯ ಕಲ್ಯಾಣ ಚಾಲುಕ್ಯರ ಕಾಲದ ಸ್ತ್ರೀಯರು ವಿದ್ಯಾವಂತರಾಗಿದ್ದರು ಎಂಬುವದಕ್ಕೆ ಶಾಸನಗಳು ಖಚಿತವಾದ ಪುರಾವೆಯನ್ನು ನೀಡುವುದಿಲ್ಲ. ಆದರೆ ಶಾಸನಗಳು ಸ್ತ್ರೀಯರು ಅಗ್ರಹಾರಗಳ ಆಡಳಿತವನ್ನು ನಡೆಸಿಕೊಂಡು ಹೋಗುತ್ತಿದ್ದರು ಎಂದು ತಿಳಿಸುತ್ತವೆ. ಇದರಿಂದಾಗಿ ಸ್ತ್ರೀಯರು ಸಹ ವಿದ್ಯಾವಂತರಾಗಿದ್ದರೆಂದು ಊಹಿಸಬಹುದು. ಅಂತಹ ಶಾಸನಗಳು ಹೀಗಿವೆ. ಆರನೇ ವಿಕ್ರಮಾದಿತ್ಯನ ರಾಣಿ ಜಾಕಲದೇವಿ ಇಂಗಳಿಗೆಯ ಅಗ್ರಹಾರವನ್ನು ನೋಡಿಕೊಳ್ಳುತ್ತಿದ್ದಳು.[54] ಈತನ ಇನ್ನೊಬ್ಬ ರಾಣಿ ಚಂದಲದೇವಿಯು ಆಲಂದೆ-1000 ಭತ್ತ ಗ್ರಾಮವನ್ನು ಆಳುತ್ತಿದ್ದಳು.[55] ಮತ್ತೊಬ್ಬ ರಾಣಿ ಮೈಲಳದೇವಿ ದಿಗ್ಗಾಂವಿ ಅಗ್ರಹಾರವನ್ನು ಆಳುತ್ತಿದ್ದಳು.[56]

ಗುಲ್ಬರ್ಗ ಜಿಲ್ಲೆಯ ಚರಿತ್ರೆಯಲ್ಲಿ ಕಲ್ಯಾಣ ಚಾಲುಕ್ಯರ ಶೈಕ್ಷಣಿಕ ಕೇಂದ್ರಗಳು ಪ್ರಮುಖವಾದ ಸ್ಥಾನವನ್ನು ಪಡೆದಿದ್ದವು. ಅವರ ಕಾಲಾವಧಿಯ ಶಾಸನಗಳು ಅಂದಿನ ಅಗ್ರಹಾರಗಳು, ಮಠಗಳು, ಘಟಿಕಾಸ್ಥಾನಗಳು, ಅಧ್ಯಯನದ ವಿಷಯ, ಸ್ತ್ರೀಯರ ಶಿಕ್ಷಣದ ಬಗ್ಗೆ ಸಮೃದ್ಧವಾದ ಮಾಹಿತಿಯನ್ನು ನೀಡುತ್ತವೆ.

ಸೇಡಂ ತಾಲೂಕಿನ ಹಂದರ್ಕಿ ಗ್ರಾಮದ ಅಗ್ರಹಾರವು ಕನ್ನಡ ಓದುವ ವಿದ್ಯಾರ್ಥಿಗಳಿಗೆ ನೀಡಿದ ದತ್ತಿಯನ್ನು ದಾಖಲಿಸುತ್ತದೆ. ಪ್ರಸ್ತುತ ಶಾಸನ ಕರ್ನಾಟಕದಲ್ಲಿಯೇ ಅತಿ ಮಹತ್ವ ಪಡೆದಂತಹ ಶಾಸನವಾಗಿದೆ. ಏಕೆಂದರೆ ಈ ಅವಧಿಯಲ್ಲಿ ಇಂತಹ ನಿದರ್ಶನ ನೀಡುವ ಮತ್ತೊಂದು ಶಾಸನವು ಕರ್ನಾಟಕದಲ್ಲಿ ಲಭ್ಯವಾಗಿಲ್ಲದಿರುವುದು ಒಂದು ವಿಶೇಷತೆಯಾಗಿದೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನಗಳ ಮೂಲಕ ಉತ್ತರ ಕಂಡುಕೊಳ್ಳಬೇಕಾಗಿದೆ.

## ಅಡಿಟಿಪ್ಪಣಿಗಳು

1. ಗುಲ್ಬರ್ಗ ಡಿಸ್ಟ್ರಿಕ್ಟ್. ಅಂತರ್ಜಾಲ ಮಾಹಿತಿ.
2. ಹನುಮಾಕ್ಷಿ ಗೋಗಿ., 1996, ಗುಲ್ಬರ್ಗ ಜಿಲ್ಲೆಯ ಶಾಸನಗಳು, (ಶಾ.ಸಂ.11), ಪು–287.
3. ಅದೇ, (ಶಾ.ಸಂ.17), ಪು–499.
4. ಗೋಪಾಲ.ಆರ್., 2007, ಗುಲ್ಬರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು–109.
5. ಹನುಮಾಕ್ಷಿ ಗೋಗಿ., 1996, ಪೂರ್ವೋಕ್ತ, (ಶಾ.ಸಂ.25), ಪು–180.
6. ಅದೇ, (ಶಾ.ಸಂ.27), ಪು–184.
7. ಪಾಟೀಲ್.ಎಂ.ಬಿ.(ಸಂ), 1997, ಗುಲಬರ್ಗಾ ಜಿಲ್ಲೆಯ ಗ್ಯಾಜೆಟಿಯರ್, ಪು–715.
8. ಹನುಮಾಕ್ಷಿ ಗೋಗಿ., 1996, ಪೂರ್ವೋಕ್ತ, (ಶಾ.ಸಂ.2), ಪು–113.
9. ಅದೇ, (ಶಾ.ಸಂ.46), ಪು–339.
10. ಗೋಪಾಲ.ಆರ್., 2007, ಪೂರ್ವೋಕ್ತ, ಪು–111.
11. ಹನುಮಾಕ್ಷಿ ಗೋಗಿ., 1996, ಪೂರ್ವೋಕ್ತ, (ಶಾ.ಸಂ.31), ಪು–212.
12. ಅದೇ, (ಶಾ.ಸಂ.32), ಪು–215.
13. ಅದೇ, (ಶಾ.ಸಂ.3), ಪು–273.
14. ಅದೇ, (ಶಾ.ಸಂ.70), ಪು–382.
15. ಅದೇ, (ಶಾ.ಸಂ.23), ಪು–71.
16. ಪಾಟೀಲ್.ಎಂ.ಬಿ.(ಸಂ), 1997, ಪೂರ್ವೋಕ್ತ, ಪು–7.
17. ಹನುಮಾಕ್ಷಿ ಗೋಗಿ., 1996, ಪೂರ್ವೋಕ್ತ, (ಶಾ.ಸಂ.25), ಪು–180.
18. ಅದೇ, (ಶಾ.ಸಂ.17), ಪು–499.
19. ಪಾಟೀಲ್.ಎಂ.ಬಿ.(ಸಂ), 1997, ಪೂರ್ವೋಕ್ತ, ಪು–7.
20. ಹನುಮಾಕ್ಷಿ ಗೋಗಿ, 1996, ಪೂರ್ವೋಕ್ತ, (ಶಾ.ಸಂ3), ಪು–273.
21. ಅದೇ, (ಶಾ.ಸಂ.27), ಪು–184.
22. ಅದೇ, (ಶಾ.ಸಂ.31), ಪು–212.
23. ಅದೇ, (ಶಾ.ಸಂ.32), ಪು–215.
24. ಅದೇ, (ಶಾ.ಸಂ.11), ಪು–288.
25. ಪಾಟೀಲ್.ಎಂ.ಬಿ.(ಸಂ), 1997, ಪೂರ್ವೋಕ್ತ, ಪು–743.
26. ಹನುಮಾಕ್ಷಿ ಗೋಗಿ, 1996, ಪೂರ್ವೋಕ್ತ, (ಶಾ.ಸಂ46), ಪು–339.
27. ಪಾಟೀಲ್.ಎಂ.ಬಿ.(ಸಂ), 1997, ಪೂರ್ವೋಕ್ತ, ಪು–726.
28. ಹನುಮಾಕ್ಷಿ ಗೋಗಿ, 1996, ಪೂರ್ವೋಕ್ತ, (ಶಾ.ಸಂ26), ಪು–183.
29. ಪಾಟೀಲ್.ಎಂ.ಬಿ.(ಸಂ), 1997, ಪೂರ್ವೋಕ್ತ, ಪು–735.
30. ಹನುಮಾಕ್ಷಿ ಗೋಗಿ, 1996, ಪೂರ್ವೋಕ್ತ, (ಶಾ.ಸಂ28), ಪು–195.
31. ಅದೇ, (ಶಾ.ಸಂ.31), ಪು–212.
32. ಅದೇ, (ಶಾ.ಸಂ.1), ಪು–35.
33. ಅದೇ, (ಶಾ.ಸಂ.30), ಪು–211.
34. ಅದೇ, (ಶಾ.ಸಂ.28), ಪು–194.

35. ಶಿವಾನಂದ.ವಿ., 1992, ಹೈದ್ರಾಬಾದ ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು, (ಶಾ.ಸಂ.3), ಪು–3.
36. ಹನುಮಾಕ್ಷಿ ಗೋಗಿ., 1996, ಪೂರ್ವೋಕ್ತ, (ಶಾ.ಸಂ.1), ಪು–109.
37. ಅದೇ, (ಶಾ.ಸಂ.38), ಪು–229.
38. ಗೋಪಾಲ.ಆರ್., 2007, ಪೂರ್ವೋಕ್ತ, ಪು–107.
39. ಹನುಮಾಕ್ಷಿ ಗೋಗಿ., 1996, ಪೂರ್ವೋಕ್ತ, (ಶಾ.ಸಂ.27), ಪು–184.
40. ಅದೇ, (ಶಾ.ಸಂ.27), ಪು–184.
41. ಅದೇ, (ಶಾ.ಸಂ.11), ಪು–29.
42. ಅದೇ, (ಶಾ.ಸಂ.31), ಪು–212.
43. ಅದೇ, (ಶಾ.ಸಂ.70), ಪು–382.
44. ಅದೇ, (ಶಾ.ಸಂ.6), ಪು–46.
45. ಅದೇ, (ಶಾ.ಸಂ.62), ಪು–366.
46. ಅದೇ, (ಶಾ.ಸಂ.11), ಪು–29,30.
47. ಅದೇ, (ಶಾ.ಸಂ.32), ಪು–215.
48. ಅದೇ, (ಶಾ.ಸಂ.11), ಪು–288.
49. ಅದೇ, (ಶಾ.ಸಂ.2), ಪು–113.
50. ಅದೇ, (ಶಾ.ಸಂ.38), ಪು–229.
51. ಅದೇ, (ಶಾ.ಸಂ.1), ಪು–465.
52. ಅದೇ, (ಶಾ.ಸಂ.3), ಪು–273.
53. ಅದೇ, (ಶಾ.ಸಂ.1), ಪು–35.
54. ಶಿವಾನಂದ.ವಿ., 1992, ಪೂರ್ವೋಕ್ತ, (ಶಾ.ಸಂ.23), ಪು–49.
55. ಹನುಮಾಕ್ಷಿ ಗೋಗಿ., 1996, ಪೂರ್ವೋಕ್ತ, (ಶಾ.ಸಂ.38), ಪು–229.
56. ಅದೇ, (ಶಾ.ಸಂ.25), ಪು–180.

## ಪರಾಮರ್ಶನ ಗ್ರಂಥಗಳು

1. ಗೋಪಾಲ.ಆರ್.(ಸಂ), 2007, *ಗುಲಬರ್ಗಾ ಜಿಲ್ಲೆಯ ಇತಿಹಾಸ ಹಾಗೂ ಪುರಾತತ್ವ*, ಮೈಸೂರು: ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ.
2. ಪಾಟೀಲ್.ಎಂ.ಬಿ.(ಸಂ), 1997, *ಗುಲಬರ್ಗಾ ಜಿಲ್ಲೆಯ ಗ್ಯಾಜೆಟಿಯರ್*, ಬೆಂಗಳೂರು: ಕರ್ನಾಟಕ ಗ್ಯಾಜೆಟಿಯರ್ ಇಲಾಖೆ.
3. ಶಿವಾನಂದ.ವಿ., 1992, *ಹೈದ್ರಾಬಾದ ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು*, ಕನ್ನಡ ಅಧ್ಯಯನ ಪೀಠ, ಬನಾರಸ ಹಿಂದೂ ವಿಶ್ವವಿದ್ಯಾಲಯ.
4. ಹನುಮಾಕ್ಷಿ.ಗೋಗಿ., 1996, *ಗುಲ್ಬರ್ಗ ಜಿಲ್ಲೆಯ ಶಾಸನಗಳು*, ಹುಬ್ಬಳ್ಳಿ: ಶಿವಚಂದ್ರ ಪ್ರಕಾಶನ.

■

## ಆಕರ ವಿಭಾಗ

# ಸಿಂಗರಾಜಪುರ ಗ್ರಾಮದ ಅಪ್ರಕಟಿತ ಶಾಸನಗಳು

□ ಮಂಜುನಾಥ ಎಂ.ಕೆ.
ಸಂಶೋಧನಾ ವಿದ್ಯಾರ್ಥಿ,
ಕುವೆಂಪು ಕನ್ನಡ ಅಧ್ಯಯನ
ಸಂಸ್ಥೆ, ಮೈಸೂರು
ವಿಶ್ವವಿದ್ಯಾನಿಲಯ,
ಮಾನಸಗಂಗೋತ್ರಿ, ಮೈಸೂರು.

**1. ಸಿಂಗರಾಜಪುರ ಗ್ರಾಮದ ಕೆರೆಯ ಬಳಿಯಿರುವ ಶಾಸನ:**

ರಾಮನಗರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ಸಿಂಗರಾಜಪುರ ಗ್ರಾಮದ ದೊಡ್ಡ ಕೆರೆಯ ಕೋಡಿಯ ಬಳಿಯಲ್ಲಿ ಚನ್ನಪಟ್ಟಣ–ಸಾತನೂರು ರಸ್ತೆಯಲ್ಲಿ ಶಿಲಾಶಾಸನವೊಂದಿದೆ. ಕೆರೆಯಲ್ಲಿ ಹೂತುಹೋಗಿದ್ದ ಈ ಶಾಸನವನ್ನು ಇತ್ತೀಚೆಗೆ ಅಲ್ಲಿಂದ ತಂದು ರಸ್ತೆಯ ಪಕ್ಕದಲ್ಲಿ ನಿಲ್ಲಿಸಿರುತ್ತಾರೆ. ಸುಮಾರು ಐದುವರೆ ಅಡಿ ಉದ್ದ, ಎರಡು ಅಡಿ ಅಗಲ ಹಾಗೂ ಒಂದುಕಾಲು ಅಡಿ ದಪ್ಪವಾದ ಕಣಶಿಲೆಯ ಫಲಕದ ಮೇಲೆ ಈ ಶಾಸನವನ್ನು ಕಂಡರಿಸಲಾಗಿದೆ. ಈ ಶಾಸನದ ಭಾಷೆ ಹಾಗೂ ಲಿಪಿಯು ಕನ್ನಡವಾಗಿದೆ. ಈ ಲಿಪಿಯು ಹೊಯ್ಸಳರ ಕಾಲದ್ದಾಗಿದ್ದು, ಸುಂದರವಾಗಿ ಕಡೆಯಲಾಗಿದೆ. ಕಣಶಿಲೆಯಾಗಿದ್ದರೂ ಬಳಪವ ಕಲ್ಲಿನಲ್ಲಿ ಕೊರೆಯುವಂತೆ ಸಣ್ಣದಾದ ಅಕ್ಷರಗಳನ್ನು ಸುಂದರವಾಗಿ ಕೊರೆದಿರುವುದು ವಿಶೇಷವಾಗಿದೆ. ಶಾಸನದಲ್ಲಿ ಒಟ್ಟು 48 ಸಾಲುಗಳ ಪಾಠವಿದೆ.

ಶಾಸನ ಪಾಠದ ಮೇಲ್ಭಾಗದಲ್ಲಿ ಸುಮಾರು ಒಂದು ಅಡಿ ಎತ್ತರವಾದ ಉಬ್ಬುಶಿಲ್ಪವನ್ನು ಕಡೆಯಲಾಗಿದೆ. ಶಾಸನ ಫಲಕದ ತೀರಾ ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಶಿಲ್ಪಗಳು. ಅದರ ಕೆಳಭಾಗದಲ್ಲಿ ಬಲಮುಂಗಾಲನ್ನು ಮೇಲಕ್ಕೆ ಎತ್ತಿ ನಿಂತಿರುವ ಹುಲಿ, ಅದರ ಪಕ್ಕದಲ್ಲಿ ಕಠಾರಿ, ಅಂಕುಶ, ನೇಗಿಲು, ಎಣ್ಣೆಯ ಗಾಣದ ಶಿಲ್ಪಗಳನ್ನು ಕಾಣಬಹುದು.

**ಶಾಸನ ಪಾಠ :**

1. ಶ್ರೀ ಸ್ವಸ್ತಿ ಸಮಸ್ತ ಭುವನಾಸ್ರಯಂ ಪ್ರಿಥ್ವೀವಲ್ಲಭಂ
2. ಮಹಾರಾಜಾಧಿರಾಜಂ ದ್ವಾರಾವತಿ ಪುರವರಾಧೀಸ್ವರಂ ಯಾ
3. ದವ ಕುಳಾಂಬರ ದ್ಯುಮಣಿ . . . . . . . . . .
4. . . . . . ಮಲಪರೊಳುಗಂಡ . . . . . . . .

5. ಹೊಯ್ಸಳ . . . ಯದಂ . . . . . . . . .
6. ದೇವರಿಂ . . ಯ . . ರ . ರ . . . . ತನೆಯಂ
7. ವಿನೆಯಾದಿತ್ಯಂ। ಆತನ ತನಯಂ ಎಱೆಯಂಗಂ ಆತ
8. ನ ತನಯಂ ವಿಷ್ಣುನ್ರಿಪಾಳಂ। ಆತನ್ಸಾದಂ ಶ್ರೀವಿಭು ವಿಕ್ರಂ
9. ತ ನಾರಸ್ಸಿಂನಾಹವಸ್ಸಿಂ। ಆತನ ತನಯಂ ಬಲ್ಲಾಳಂ। ಆ
10. ತನ ತನೆಯಂ ಬಲ್ಲಾಳದೇವಂ। ಆತನ ಮಗಂ ಬಲ್ಲಾಳ
11. ೦। ಆತನ ಮಗಂ ನಾರಾಸ್ಸಿಂ। ಆತ[ನ] ಮಗಂ ಸೋಮನರೇ
12. ಂದ್ರಂ॥ ಆ[ತನ]ತನೂಭವ ಶ್ರೀವೀರನಾರಾಸ್ಸಿಂ॥ ಬಿರುದಾವ
13. ಳಿ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀಪ್ರಿಥ್ವೀವಲ್ಲಭಂ
14. ಮಹಾರಾಜಾಧಿರಾಜಂ ಪರಮಪರಮೇಸ್ವರಂ ದ್ವಾ
15. ರಾವತಿ ಪುರವರಾಧೀಸ್ವರಂ ಯಾದವ ಕುಲಾಂಬ
16. ರದ್ಯುಮಣಿಯಂ। ಸರ್ಬ್ಬಜ್ಞಚೂಡಾಮಣಿ ಮಲೆ
17. ರಾಜರಾಜ ಮಲಪರೊಳುಗಂಡ ಗಂಡಭೇರುಂ
18. ಡ ಕದನಪ್ರಚಂಡನಸಹಾಯಸೂರ ಏಕಾಂಕವೀರ
19. ಸನಿವಾರಸಿದ್ಧಿ ಗಿರಿದುರ್ಗ್ಗಮಲ್ಲ ಛಲದಂಕ ರಾಮ
20. ವೈರಿಭ ಕಂಠೀರವಂ। ಮಗರಾರಾಜ್ಯ ನಿರ್ಮ್ಮೂಲನುಂ ಚೋ
21. ಳು ರಾಜ್ಯ ಪ್ರತಿಷ್ಠಾಚಾರಿಯನುಂ। ಪಾಂಡ್ಯ ಕುಲ ಸ
22. ಮುದ್ಧರಣನುಂ ಚೋಳ . . . ಸಮಳ . ಚೇರಭ
23. ಯಂಕರನುಂ ಕಾಡ[ವ]ರಾಯ ದಿಸಾಪಟ್ಟನುಂ ನಿಸ್ಸಂಕ
24. ಪ್ರತಾಪ ಚಕ್ರವರ್ತ್ತಿ ಹೊಯ್ಸಣ ಭುಜಬಳ ಶ್ರೀ ವೀ
25. ರನಾರಸ್ಸಿಂಹದೇವರಸರು ದೋರಸಮುದ್ರದ ನೆಲೆ
26. ವೀಡಿನೊಳು ಪ್ರಿಥುವಿರಾಜ್ಯಂಗೆಯುತ್ತಿರೆ
27. ವಿರೋಧಿ ಸಂವತ್ಸರದ ಮಾಘ ಸು 15 । ಬುಧ
28. ದಂದು । ನಾರಸ್ಸಿಂ ನೆ[ನಿ]ಪಂದೇವಂ [ಅ]ಹವ ಮಂಡಳಿಕರ
29. ಗಂಡ ಸ್ವಾಮಿವ್ರಿಹಶ್ರೀದಾಸರ ಗಂಡ ಜಗದೊ
30. ಬ್ಬಗಂಡ ಕೆಳಲಾದಿರಾಯ ಭಂಡಾರಿ ರಾಮಯ
31. ಮಯನ ಮಗ ರಾಮಂಣ ಹೊಂನಪ್ಪಗವುಡು
32. ಹನಿವೂರಲು ಬು[ಧ]ವಾರ ಸಂಥೆಯನಿರಿಸಲು ವೂರ
33. ಪಟ್ಟಣಸ್ವಾಮಿ ರಾಘವಸೆಟ್ಟಿಯ ಮಗ
34. ಮಸಣಿಸೆಟ್ಟಿ ತಂಗಿ ಗಿರ್ಜಿಯ ಮಗ ಚವ
35. ಣ ಸೆಟ್ಟಿಯರಿಗೆ ಕೊಟ್ಟ ಷಾಸನದ ಕ್ರಮವೆಂಥೆ
36. ಂದಡೆ। ಹನಿವೂರ ಹಿರಿಯಕೆರೆಯ ಕೆಱಗೆ ಗೌ
37. ಡನು ಧರ್ಮದೊಳಗೂಡಿ ಸಲಗೆ ಆಱು ಬೆ
38. ದಲು ಭೂಮಿಯ ಸಱುವ ಮಾನ್ಯದಲು . . .
39. ಹದಿನಾಲ್ಕು ಪಟಣದಲಿ ದಂಡವಿಲ್ಲ ತಪ್ಪು
40. ತಱುಡಿಯಿಲ್ಲ ಅಂಣನ ಹೊಡವೆ ಥಮಂ
41. ಗೆ ಥಂಮನ ಹೊಡವೆ ಅಣ್ಣಂಗೆ ಆರು ಯಿಲದೆಡೆ
42. ಕೆ . . ನಡವುದು. . . . . . . . . . . . .
43. . ಯ . . . . . . ಡಸಲಮನ . . ವಡು
44. . ವ . . ಯಾದಿಪರ . ೦ . ಣ . . . . . . .
45. ಆಚಂದ್ರಾರ್ಕ ತಾರಾಬರಂ ಸಲುವಂತಾಗಿ ಕೊಟ್ಟ ದಾ
46. ನ ಮಂಗಳ ಮಹಾ ಶ್ರೀಶ್ರೀ। ಮೀ ಸಾಸನವ ಬ


ಸಿಂಗರಾಜಪುರ ಗ್ರಾಮದ ಕೆರೆಯ ಬಳಿಯಿರುವ ಶಾಸನ

47. ರದಂ ರಾಮಯನ . . ಚಾಕರಿಯ ಮಾಯಂಣ
48. ನವರ ಅಳಿಯ ಮಾಯಂಣ

**ಶಾಸನದ ವಿಶ್ಲೇಷಣೆ : ಶಾಸನದ ಕಾಲ ಕ್ರಿ.ಶ.1290 ಜನವರಿ 25, ಬುಧವಾರ.**

ಹೊಯ್ಸಳ ದೊರೆ ಮೂರನೇ ನರಸಿಂಹನು ದೋರಸಮುದ್ರದ ನೆಲೆವೀಡಿನಿಂದ ಆಳ್ವಿಕೆ ನಡೆಸುವ ಕಾಲದಲ್ಲಿ ಆತನ ಮಾಂಡಲಿಕನಾದ 'ಕೆಳಲಾದಿರಾಯ' ಭಂಡಾರಿ ರಾಮಯ್ಯನ ಮಗ ರಾಮಣ್ಣಹೊನ್ನಪ್ಪಗವುಡು ಹನಿವೂರಿ(ಈಗಿನ ಹನಿಯೂರು)ನಲ್ಲಿ ಬುಧವಾರದ ಸಂತೆಯನಿರಿಸಲು ಊರಪಟ್ಟಣಸ್ವಾಮಿಯಾದ ರಾಘವಸೆಟ್ಟಿಯ ಮಗ ಮಸಣಿಸೆಟ್ಟಿ, ತಂಗಿ ಗಿರಿಜೆಯ ಮಗ ಚವಣಸೆಟ್ಟಿಯರಿಗೆ ಹನಿವೂರಿನ ಹಿರಿಯ ಕೆರೆಯ ಕೆಳಗೆ (ಸಲಗೆ-6) ಬೆದಲು ಭೂಮಿಯನ್ನು ಸರ್ವಮಾನ್ಯವಾಗಿ ದಾನಕೊಟ್ಟ ವಿವರ ಶಾಸನದಲ್ಲಿದೆ. ಜೊತೆಗೆ ಇವರಿಗೆ ಹದಿನಾಲ್ಕು ಪಟ್ಟಣದಲ್ಲಿ ದಂಡ ಹಾಗೂ ತಪ್ಪುತವುಡಿಯಿಂದ ವಿನಾಯಿತಿ ನೀಡಿರುವುದನ್ನು ದಾಖಲಿಸಲಾಗಿದೆ. ಕೊನೆಯಲ್ಲಿ ಈ ಶಾಸನವನ್ನು ಭಂಡಾರಿ ರಾಮಯ್ಯನ ಮನೆಚಾಕರಿಯ ಮಾಯಣ್ಣನವರ ಅಳಿಯ ಮಾಯಣ್ಣನು ಬರೆದನೆಂಬ ಉಲ್ಲೇಖವಿದೆ.

ಈ ಶಾಸನದ ಆರಂಭದಲ್ಲಿ ಹೊಯ್ಸಳ ರಾಜರ ವಂಶಾವಳಿಯನ್ನು ನೀಡಿ, ಮೂರನೇ ನರಸಿಂಹನ ಬಿರುದಾವಳಿಗಳಾದ 'ಸ್ವಸ್ತಿಸಮಸ್ತ ಭುವನಾಶ್ರಯಂ, ಶ್ರೀಪ್ರಿಥ್ವೀವಲ್ಲಭಂ, ಮಹಾರಾಜಾಧಿರಾಜಂ, ಪರಮಪರಮೇಸ್ವರಂ, ದ್ವಾರಾವತಿ ಪುರವರಾಧೀಸ್ವರಂ, ಯಾದವಕುಲಾಂಬರದ್ಯುಮಣಿಯಂ, ಸರ್ಬ್ಬಜ್ಞಚೂಡಾಮಣಿ, ಮಲೆರಾಜರಾಜ, ಮಲಪರೊಳುಗಂಡ, ಗಂಡಭೇರುಂಡ, ಕದನಪ್ರಚಂಡ, ಅಸಹಾಯಸೂರ, ಏಕಾಂಕವೀರ, ಸನಿವಾರಸಿದ್ಧಿ, ಗಿರಿದುರ್ಗ್ಗಮಲ್ಲ, ಛಲದಂಕ ರಾಮ, ವೈರಿಭ ಕಂಠೀರವಂ, ಮಗರರಾಜ್ಯ ನಿರ್ಮೂಲನುಂ, ಚೋಳುರಾಜ್ಯ ಪ್ರತಿಷ್ಟಾಚಾರಿಯನುಂ, ಪಾಂಡ್ಯಕುಲ ಸಮುದ್ಧರಣನುಂ, ಚೇರಭಯಂಕರನುಂ, ಕಾಡವರಾಯ ದಿಸಾಪಟ್ಟನುಂ, ನಿಸ್ಸಂಕಪ್ರತಾಪ ಚಕ್ರವರ್ತಿ' ಮೊದಲಾದವುಗಳಿಂದ ವರ್ಣಿಸಲಾಗಿದೆ. ನರಸಿಂಹನ ಮಾಂಡಲೀಕನಾದ ಭಂಡಾರಿ ರಾಮಯ್ಯನು 'ಅಹವ ಮಂಡಳಿಕರಗಂಡ, ಸ್ವಾಮಿವ್ರಿಹ(ವಿದ್ರೋಹರ)ಗಂಡ, ಜಗದೊಬ್ಬಗಂಡ, ಕೆಳಲಾದಿರಾಯ' ಎಂಬ ಬಿರುದುಗಳನ್ನು ಹೊಂದಿದ್ದನು ಎಂದು ತಿಳಿಯುತ್ತದೆ. ಭಂಡಾರಿ ರಾಮಯ್ಯನು ಈಗಿನ ರಾಮನಗರ, ಚನ್ನಪಟ್ಟಣ, ಮದ್ದೂರು, ಮಳವಳ್ಳಿ ಮೊದಲಾದ ತಾಲ್ಲೂಕುಗಳನ್ನು ಒಳಗೊಂಡಿದ್ದ ಕೆಳಲೆನಾಡಿನ ಅಧಿಪತಿಯಾಗಿದ್ದ ಎಂದು ತಿಳಿಯುತ್ತದೆ.

ಈ ಶಾಸನ ಲಿಪಿಗೆ ಸಂಬಂಧಿಸಿದಂತೆ ಹೇಳುವುದಾದರೆ ಹೊಯ್ಸಳರ ಸುಂದರ ಲಿಪಿಯನ್ನು ಶಿಲ್ಪಿಯು ಕಣಶಿಲೆಯ ಮೇಲ ಬಳಪದ ಕಲ್ಲಿನಲ್ಲಿ ಕೆತ್ತುವಂತೆ ಕಂಡರಿಸಿರುವುದು ವಿಶೇಷವಾಗಿದೆ. ಆದರೂ ಈತನಿಗೆ ಅಕ್ಷರ ಜ್ಞಾನವಿರಲಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಈ ಶಾಸನದ 9-10ನೇ ಸಾಲಿನಲ್ಲಿ ಬರುವ ಹೊಯ್ಸಳರ ವಂಶಾವಳಿಯನ್ನು ತಿಳಿಸುವಲ್ಲಿ ಬಲ್ಲಾಳ ಉಲ್ಲೇಖ ಮೂರು ಬಾರಿ ಬರುವುದನ್ನು ಕಾಣಬಹುದು. ಜೊತೆಗೆ ಶಾಸನದಲ್ಲಿ ಬಹಳಷ್ಟು ಕಾಗುಣಿತ ದೋಷಗಳಿಂದ ಕೂಡಿರುವುದನ್ನು ಕಾಣಬಹುದು. ಶಾಸನದಲ್ಲಿ ಕೆಲವೆಡೆ ಪದದೋಷ, ಅಲ್ಪಪ್ರಾಣ, ಮಹಾಪ್ರಾಣ ಅಕ್ಷರಗಳ ಬಳಕೆಯಲ್ಲೂ ತಪ್ಪು ಮಾಡಿರುವುದನ್ನು ಗುರುತಿಸಬಹುದಾಗಿದೆ. ಶಾಸನದಲ್ಲಿ ಬರುವ 'ಸಂಥೆ'(ಸಂತೆ), 'ಥಂಮ'(ತಮ್ಮ), 'ಷಾಸನ'(ಶಾಸನ), 'ಹೊಡವೆ'(ಒಡವೆ) 'ಸಾಸನ'(ಶಾಸನ) ಮೊದಲಾದ ಪದಗಳನ್ನು ಗಮನಿಸಬಹುದು.

**2. ಸಿಂಗರಾಜಪುರದ ಗೋಪಾಲಕೃಷ್ಣ ದೇವಾಲಯದ ಗೋಡೆಯಲ್ಲಿನ ಶಾಸನ:**

ಇದೇ ಗ್ರಾಮದ ಚೋಳರ ಕಾಲದ ಗೋಪಾಲಕೃಷ್ಣ ದೇವಾಲಯದ ನವರಂಗದ ಗೋಡೆಯ ಕಲ್ಲಿನಲ್ಲಿದ್ದ ಶಾಸನದ ತುಣುಕೊಂದನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡುವ ಸಂದರ್ಭದಲ್ಲಿ ಅಲ್ಲಿಂದ ತೆಗೆದು ದೇವಾಲಯದ ಆವರಣದಲ್ಲಿ ತಂದು ಇಟ್ಟಿರುತ್ತಾರೆ. ಬಹುಪಾಲು ತೃಟಿತವಾಗಿರುವ ಈ ಶಾಸನವು ಸುಮಾರು ಎರಡುವರೆ ಅಡಿ ಉದ್ದ ಹಾಗೂ ಒಂದು ಅಡಿ ಅಗಲದ ಕಣಶಿಲೆಯ ಫಲಕದ ಮೇಲೆ ಕಂಡರಿಸಿಲಾಗಿದೆ. ಶಾಸನದಲ್ಲಿ ಒಟ್ಟು 19 ಸಾಲುಗಳ ಪಾಠವಿದೆ. ಶಾಸನ ಲಿಪಿ ಹಾಗೂ ಭಾಷೆ ಕನ್ನಡದಲ್ಲಿದೆ. ಲಿಪಿಯ ದೃಷ್ಟಿಯಿಂದ ಈ ಶಾಸನವನ್ನು ಕ್ರಿ.ಶ.14ನೇ ಶತಮಾನದೆಂದು ಗುರುತಿಸಬಹುದು. ಈ ಶಾಸನ ಸಾಕಷ್ಟು ಸವೆದಿರುವುದರಿಂದ ಸಂಪೂರ್ಣ ಪಾಠವನ್ನು ಓದಲು ಸಾಧ್ಯವಾಗಲಿಲ್ಲ.

**ಶಾಸನ ಪಾಠ :**

(ಮೊದಲ ಎರಡು ಸಾಲುಗಳು ತೃಟಿತವಾಗಿವೆ)

3. ಮ . ದ . [ರೋ]
4. ಹಿಣಿ ನಕ್ಷತ್ರ
5. . . . ಲಕ್ಕಿ ಶ
6. ನಸಂದುದು .[ಸಿಂ]
7. ಗರಾಜಪುರದ .
8. . . ಹೋದ . ದಿ
9. ವೀರತನಂ ಮಗ .
10. ಮೇಣಸಿಹಳಿಯ .

(ಮುಂದಿನ ಐದು ಸಾಲುಗಳು ತೃಟಿತವಾಗಿವೆ)

16. ಮುಂತಾದ ಭೂ
17. . ಗೆ ಆ ಊರ

(ಮುಂದಿನ ಎರಡು ಸಾಲುಗಳು ತೃಟಿತವಾಗಿವೆ)



ಸಿಂಗರಾಜಪುರದ ಗೋಪಾಲಕೃಷ್ಣ ದೇವಾಲಯದ ಗೋಡೆಯಲ್ಲಿನ ಶಾಸನ

**ಶಾಸನದ ವಿಶ್ಲೇಷಣೆ :**

ಈ ಶಾಸನದಲ್ಲಿ ದಾಖಲಾಗಿರುವ ಮಾಹಿತಿಯನ್ನು ಗಮನಿಸಿದಾಗ ಸಿಂಗರಾಜಪುರದ ಗೋಪಾಲಕೃಷ್ಣ ದೇವಾಲಯಕ್ಕೆ ರೋಹಿಣಿ ನಕ್ಷತ್ರದ ಸಂದರ್ಭದಲ್ಲಿ ಮೇಣಸಿಹಳ್ಳಿ(ಈಗಿನ ಮೇಣಸಿಗನಹಳ್ಳಿ) ಗ್ರಾಮದಲ್ಲಿ ಭೂದಾನ ಮಾಡಿ ಶಾಸನ ಹಾಕಿಸಿರಬಹುದು. ಈ ಶಾಸನದ ಆಧಾರದಿಂದ ಈ ಗ್ರಾಮಕ್ಕೆ ಕ್ರಿ.ಶ.14ನೇ ಶತಮಾನಕ್ಕಿಂತ ಪೂರ್ವದಲ್ಲಿಯೇ 'ಸಿಂಗರಾಜಪುರ' ಎಂಬ ಹೆಸರು ಬಂದಿತ್ತು ಎಂದು ತಿಳಿಯುತ್ತದೆ. ಬಹುಶಃ ನರಸಿಂಹನೆಂಬ ಹೊಯ್ಸಳ ಸಾಮ್ರಾಜ್ಯದ ರಾಜನೊಬ್ಬನಿಂದ ಈ ಗ್ರಾಮ ಸ್ಥಾಪನೆಗೊಂಡಿದೆ ಎಂದು ಊಹಿಸಬಹುದು. ಈ ಶಾಸನ ಕಲ್ಲಿನ ಜೊತೆಗಿದ್ದ ಮತ್ತೊಂದು ಶಾಸನ ತುಣುಕನ್ನು ದೇವಾಲಯದ ಗೋಡೆಗೆ ಸೇರಿಸಿ ಮುಚ್ಚಿದ್ದಾರೆ ಎಂದು ತಿಳಿದುಬರುತ್ತದೆ.

---

**ಕೃತಜ್ಞತೆಗಳು:** ಈ ಶಾಸನಗಳನ್ನು ಓದಲು ನೆರವಾದ ಪ್ರೀತಿಯ ಗುರುಗಳಾದ ಪ್ರೊ. ಎಂ.ಜಿ. ಮಂಜುನಾಥ್. ಸೀತಾರಾಮ ಜಾಗೀರ್‌ದಾರ್ ಅವರಿಗೂ ಹಾಗೂ ಈ ಶಾಸನಗಳ ಪಡಿಯಚ್ಚನ್ನು ತೆಗೆಯಲು ಸಹಾಯ ಮಾಡಿದ ಸ್ನೇಹಿತನಾದ ಬಿ.ಪಿ.ಸತೀಶ್‌ಕುಮಾರನಿಗೂ ಕೃತಜ್ಞತೆಗಳು.

## ಪುಸ್ತಕ ವಿಮರ್ಶೆ

# ಚೀನಾದಲ್ಲಿ ಬೌದ್ಧ ಧಮ್ಮ –ಒಂದು ಅಧ್ಯಯನ

–ರಶ್ಮಿ ಎಸ್.
ಅತಿಥಿ ಉಪನ್ಯಾಸಕರು.
ಯೂನಿವರ್ಸಿಟಿ ಕಲಾಕಾಲೇಜು. ತುಮಕೂರು



ಪ್ರಾಚೀನ ಚೀನಾದಲ್ಲಿ ಬೌದ್ಧ ಧಮ್ಮ

ಲೇಖಕರು: ಡಾ. ಸಿ.ಚಂದ್ರಪ್ಪ
ಪ್ರಕಾಶಕರು: ಬೋಧಿವೃಕ್ಷ ಪ್ರಕಾಶನ,
172, 9ನೇ ಅಡ್ಡರಸ್ತೆ, ಎಕ್ಸ್‌ಸರ್ವಿಸ್‌ಮೆನ್ ಕಾಲೋನಿ,
ವಸಂತ ನಗರ, ಬೆಂಗಳೂರು 560052

ಪುಟ ಸಂಖ್ಯೆ: 160 ಬೆಲೆ : ರೂ. 140
ಮೊದಲ ಮುದ್ರಣ: 2103

**ಬು**ದ್ಧ ಮತ್ತು ಬೌದ್ಧ ಧರ್ಮ ಅಂದಿನಿಂದ ಇಂದಿನವರೆಗೂ ಸಮಾಜವನ್ನು ಒಂದಲ್ಲ ಒಂದು ಬಗೆಯಲ್ಲಿ ಆವರಿಸುತ್ತಲೇ ಪ್ರಸ್ತುತವಾಗಿದೆ. ಬೌದ್ಧ ಧರ್ಮದೊಳಗೆ ಆಧುನಿಕ ಸಮಾಜದಲ್ಲಿ ಪ್ರಾಮುಖ್ಯತೆ ಪಡೆದಿರುವ ಹಲವು ವಿಚಾರಗಳನ್ನು ಅನೇಕ ಹಂತಗಳಲ್ಲಿ ಕಾಣಬಹುದು. ಇದರಲ್ಲಿರುವ ರಾಜಕೀಯ ಮತ್ತು ಆರ್ಥಿಕ ದೃಷ್ಟಿಕೋನವು ಆಶ್ಚರ್ಯ ಹುಟ್ಟಿಸುವಷ್ಟು ಆಧುನಿಕವಾಗಿರುವುದು ಪ್ರಸ್ತುತ ಸಮಾಜದಲ್ಲಿಯೂ ಒಂದು ಪ್ರಮುಖ ಮಾರ್ಗವನ್ನಾಗಿಸಿದೆ. ಭಾರತ ಮತ್ತು ಚೀನಾ ನಡುವಿನ ಪ್ರಾಚೀನ ವ್ಯಾಪಾರ ಸಂಚಾರ ಹಾಗೂ ರೇಷ್ಮೆ ಮಾರ್ಗವು ಕ್ರಿ.ಶ. 1ನೇ ಶತಮಾನದ ವೇಳೆಗೆ ಮಹಾಯಾನ ಪಂಥವು ಚೀನಾದೊಳಗೆ ಮೊದಲ ಹಂತದಲ್ಲಿ ಪಸರಿಸಲು ಕಾರಣವಾಯಿತು. ಹೀಗೆ ಪ್ರವೇಶಿಸಿದ ಬೌದ್ಧ ಧರ್ಮ ಚೀನಾದಲ್ಲಿ ಬೆಳೆದು ಬಂದ ಬಗೆ ಮತ್ತು ಅದರ ಸ್ವರೂಪ ಕುರಿತು ಈ ಕೃತಿಯು ವಿವರಿಸುವುದು.

ಬೌದ್ಧ ಧರ್ಮವು ಚೀನಾದಲ್ಲಿರುವ ಅತ್ಯಂತ ಪ್ರಮುಖ ಧರ್ಮಗಳಲ್ಲೊಂದು. ಕನ್‌ಫ್ಯೂಷಿಯಾನಿಸಂ, ತಾವೋಯಿಸಂ ಮತ್ತು ಬುದ್ಧಿಸಂಗಳು ಸಾವಿರಾರು ವರ್ಷಗಳಿಂದ ಚೀನಾದ ಸಮಾಜವನ್ನು ಪ್ರಭಾವಿಸಿರುವುದು ಕಂಡುಬರುತ್ತದೆ. ಈ ಕೃತಿಯಲ್ಲಿ ಪ್ರಾಚೀನ ಚೀನಾದಲ್ಲಿ ಬೌದ್ಧ ಧರ್ಮದ ಸ್ವರೂಪವನ್ನು ಬದಲಾಯಿಸಿದ ಹಂತಗಳನ್ನು ಮುಖ್ಯವಾಗಿ ಎರಡು ಹಂತಗಳಲ್ಲಿ ನೋಡಲಾಗಿದೆ. ಮೊದಲನೆಯದು ಕನ್‌ಫ್ಯೂಷಿಯಾನಿಸಂ ಮತ್ತು ತಾವೋಯಿಸಂಗಳೊಡನೆ ಬೌದ್ಧ ಧರ್ಮದ ಸಂಘರ್ಷ, ಅವುಗಳ ಪ್ರಭಾವವನ್ನು ಧಾರ್ಮಿಕ ಕೃತಿಗಳ ಚೌಕಟ್ಟಿನಲ್ಲಿ ನೋಡುವ ಪ್ರಯತ್ನವಿದೆ. ಎರಡನೆಯದಾಗಿ ರಾಜಾಶ್ರಯ ಹಾಗೂ

ಬೌದ್ಧ ಕೇಂದ್ರಗಳ ನೆಲೆಯಲ್ಲಿ ಗುರುತಿಸುವ ಯತ್ನವನ್ನು ಕೃತಿಯಲ್ಲಿ ಕಾಣಬಹುದು. ಬೌದ್ಧ ಧರ್ಮದ ಧಾರ್ಮಿಕ ಮತ್ತು ರಾಜಕೀಯ ವಿಚಾರಗಳು ಚೀನಾ ಸೇರಿದಂತೆ ಆಗ್ನೇಯ ದೇಶಗಳಾದ ಕೊರಿಯಾ, ಜಪಾನ್‌ಗಳ ಮೇಲೆ ಬೀರಿದ ಪ್ರಭಾವದಿಂದ ಉಂಟಾದ ಸಂಬಂಧದ ಬಗೆಯನ್ನು ಗುರುತಿಸುವ ಉದ್ದೇಶ ಹೊಂದಿದೆ. ಕ್ರಿ.ಶ. 5 ಮತ್ತು 6ನೇ ಶತಮಾನಗಳಲ್ಲಿ ಬೌದ್ಧ ಧರ್ಮದ ಉಪದೇಶಗಳು ಚೀನಾದ ವೈವಿಧ್ಯಮಯವಾದ ಸಂಸ್ಕೃತಿಯಲ್ಲಿ ಮಿಳಿತಗೊಂಡ ವಿಚಾರಗಳನ್ನು ವಿವರಿಸಲಾಗಿದೆ. ಕ್ರಿ.ಶ. 10ನೇ ಶತಮಾನದ ವೇಳೆಗೆ ಭಾರತ ಮತ್ತು ಚೀನಾ ನಡುವೆ ಇದ್ದ ಬೌದ್ಧ ಧರ್ಮದ ಸಂಪರ್ಕ, ಏಷ್ಯಾದ ಇತರ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳ ಮೇಲೆ ಚೀನಾದಲ್ಲಿ ಬೆಳೆದುಬಂದ ಬೌದ್ಧ ಧರ್ಮದ ಪ್ರಭಾವ ಮತ್ತು ಅದರ ರೂಪವನ್ನು ಗಮನಿಸಲಾಗಿದೆ.

ಕೃತಿಯಲ್ಲಿ ಆಧಾರ ಗ್ರಂಥಗಳು ಸೇರಿ ಒಟ್ಟು ಹತ್ತು ಭಾಗಗಳಿವೆ. ಅವುಗಳಲ್ಲಿ ಮುಖ್ಯವಾಗಿ ಬೌದ್ಧ ಧಮ್ಮ, ಪ್ರಾಚೀನ ಚೀನಾದ ಧಮ್ಮ ಮತ್ತು ತತ್ವಜ್ಞಾನ, ಪ್ರಾಚೀನ ಚೀನಾದಲ್ಲಿ ಬೌದ್ಧ ಧರ್ಮದ ಪ್ರವೇಶ, ಬೌದ್ಧ ಧರ್ಮದ ಕೇಂದ್ರವಾಗಿ ಚೀನಾ, ಚೀನಾ ದೇಶದಿಂದ ಭಾರತಕ್ಕೆ ಬಂದ ಬೌದ್ಧ ಯಾತ್ರಿಕರು, ಚೀನಾದಲ್ಲಿ ಬೌದ್ಧ ಧರ್ಮ ದರ್ಶನ, ಟಿಬೆಟ್‌ನಲ್ಲಿ ಬೌದ್ಧ ಧಮ್ಮ, ಚೀನಾದಲ್ಲಿ ಬೌದ್ಧ ಧರ್ಮದ ಶಾಖೆಗಳು, ಚೀನಾದ ಬೌದ್ಧಧಮ್ಮ ಮತ್ತು ವಾಸ್ತು ಶಿಲ್ಪಗಳ ಕುರಿತು ಚರ್ಚೆ ಇದೆ. ಪ್ರತಿ ಅಧ್ಯಾಯದ ಆರಂಭದಲ್ಲಿ ನೀಡಿರುವ ಉಕ್ತಿಗಳು ಪೂರಕವಾಗಿವೆ.

ಮೊದಲ ಅಧ್ಯಾಯದಲ್ಲಿ ಬೌದ್ಧ ಧರ್ಮ ಕುರಿತು ರಚಿಸಿರುವ ಅನೇಕ ಕೃತಿಗಳಲ್ಲಿರುವ ಉಲ್ಲೇಖಗಳನ್ನು ಬಳಸಿಕೊಂಡಿದ್ದಾರೆ. ಬುದ್ಧನ ವಿಚಾರಧಾರೆಯನ್ನು ಅತ್ಯಂತ ಸರಳವಾಗಿಸಿ ಪ್ರಸ್ತುತ ಪಡಿಸಿದ್ದಾರೆ. ಇಲ್ಲಿ ಬುದ್ಧನ ಬೋಧನೆಗಳು ಪ್ರಸ್ತುತ ಸಾಮಾಜಿಕ ವಿಚಾರಗಳ ಹಿನ್ನೆಲೆಯಲ್ಲಿ ಬಿಂಬಿತವಾಗಿರುವುದು ಗಮನಾರ್ಹವಾಗಿದೆ. ಮಹಾಯಾನ ಪಂಥಕ್ಕೆ ಹೆಚ್ಚು ಒತ್ತು ಕೊಟ್ಟಿದ್ದು, ಧರ್ಮ ಪ್ರಸಾರ, ಚಿಂತನೆಗಳ ಕುರಿತು ಹಲವು ಕಥನ ರೂಪಗಳನ್ನು ಅಲ್ಲಲ್ಲಿ ಬಳಸಲಾಗಿದೆ. ಪ್ರಸ್ತುತ ವಿಚಾರಧಾರೆ ಅಥವಾ ಸಮಾಜದೊಳಗಿನ ಜಾತೀಯತೆಯ ಪ್ರಭಾವ ಹಾಗೂ ಬೌದ್ಧ ಧರ್ಮದ ಮೂಲಕ ಅಸ್ಮಿತೆ ಹುಡುಕುವ ಪ್ರಯತ್ನಗಳು ಕಂಡುಬರುವುವು. ದಲಿತ ಸಮಾಜದಿಂದ ನವಬೌದ್ಧರೆಡೆಗಿನ ಪಯಣ ಮತ್ತು ನೋವಿನಿಂದ ವಿಮುಖರಾಗಲು ಪರ್ಯಾಯವಾಗಿ ಬೌದ್ಧ ಧರ್ಮ ಕಂಡುಬಂದಿರುವುದರ ಛಾಯೆಯನ್ನು ಗುರುತಿಸಬಹುದು. ಎರಡನೇ ಅಧ್ಯಾಯದ ಆರಂಭದಲ್ಲಿ ಚೀನಾದ ನಕ್ಷೆ ನೀಡಿರುವುದು ಓದುಗರ ಪ್ರವೇಶಿಕೆಗೆ ಮಾರ್ಗದರ್ಶಿಯಾಗಬಲ್ಲದು. ಮುಖ್ಯವಾಗಿ ಬೌದ್ಧ ಧರ್ಮ ಹರಡುವ ಪೂರ್ವದಲ್ಲಿನ ಧಾರ್ಮಿಕ ವಿಚಾರಧಾರೆಗಳು ಮತ್ತು ಅವುಗಳ ಸ್ಥಿತಿಗತಿಗಳ ವಿವರವಿದೆ. ಮೂರನೇ ಅಧ್ಯಾಯದಲ್ಲಿ ಭಾರತ–ಚೀನ ನಡುವೆ ಪ್ರಾರಂಭಿಕ ಮುಖಾಮುಖಿಯಲ್ಲಿ ಸಾಹಿತ್ಯ ವಿನಿಮಯ, ಅನುವಾದಗಳು ಹಾಗೂ ಕೆಲವು ರಾಜರು ಧರ್ಮಕ್ಕೆ ಅವಕಾಶಕೊಟ್ಟ ವಿಚಾರಗಳಿವೆ. ಕ್ರಿ.ಶ. 3 ರಿಂದ 5ನೇ ಶತಮಾನಗಳ ನಡುವಿನ ಕಾಲದಲ್ಲಿ ಬೌದ್ಧ ಧರ್ಮದ ಗ್ರಂಥಗಳನ್ನು ದೊಡ್ಡ ಪ್ರಮಾಣದಲ್ಲಿ ಚೀನಾ ಭಾಷೆಗೆ ತರ್ಜುಮೆ ಮಾಡಲಾಯಿತು. ಇದರ ಪರಿಣಾಮವಾಗಿ ಕ್ರಿ.ಶ. 5 ಮತ್ತು ಕ್ರಿ.ಶ. 6ನೇ ಶತಮಾನದಲ್ಲಿ ಬೌದ್ಧ ಧರ್ಮ ಹಾಗೂ ಅನುವಾದಿತ ಕೃತಿಗಳು ಚೀನೀಕರಣಗೊಂಡ

ವಿಧಾನವನ್ನು ಚರ್ಚಿಸಿರುವರು. ಇದರೊಡನೆ ಸಮಕಾಲೀನ ಚೀನಾದ ರಾಜಕೀಯ ಇತಿಹಾಸ ಹಾಗೂ ರಾಜಮನೆತನಗಳಲ್ಲಿದ್ದ ಕೆಲವು ನಂಬಿಕೆಗಳನ್ನು ಉಲ್ಲೇಖಿಸಿದ್ದಾರೆ. ನಾಲ್ಕನೆಯ ಅಧ್ಯಾಯದಲ್ಲಿ ಕ್ರಿಶ 7 ರಿಂದ ಕ್ರಿಶ. 11ನೇ ಶತಮಾನದವರೆಗೆ ಬೌದ್ಧ ಧರ್ಮದ ಬೆಳವಣಿಗೆಯನ್ನು, ಬೌದ್ಧ ಕೇಂದ್ರಗಳಾದ ಫಾಮೆನ್ ವಿಹಾರ ಮತ್ತು ವೂ ತಾಯಿ ಬೆಟ್ಟಗಳನ್ನು ಕೇಂದ್ರವಾಗಿಸಿ ಚರ್ಚಿಸಿರುವರು. ಈ ಭಾಗದಲ್ಲಿ ಘುಯಾಯಿಯ ಅಧಿಕಾರದಲ್ಲಿ ಸೇವೆ ಸಲ್ಲಿಸಿದ ಭಾರತೀಯ ಸಂಜಾತರ ಪಟ್ಟಿ ನೀಡಿರುವುದು ಉಲ್ಲೇಖನೀಯ ವಿಚಾರ. ಐದನೇ ಅಧ್ಯಾಯದಲ್ಲಿ ಭಾರತ ಮತ್ತು ಚೀನಾ ನಡುವಿನ ಧಾರ್ಮಿಕ ಕೊಡುಕೊಳ್ಳುವಿಕೆಯ ಸಂಬಂಧವನ್ನು ಭಾರತಕ್ಕೆ ಬಂದ ಪ್ರಸಿದ್ಧ ಯಾತ್ರಿಕರ ಕೃತಿಗಳ ಮೂಲಕ ನೋಡಲಾಗಿದೆ. ಆರನೆಯ ಅಧ್ಯಾಯದಲ್ಲಿ ಆರಂಭಿಕ ಹಂತದಲ್ಲಿ ಕನ್‌ಫ್ಯೂಷಿಯಸ್ ಹಾಗೂ ತಾಯೌ ಮತಗಳೊಡನೆ ನಡೆಸಿದ ಸಂಘರ್ಷ ಹಾಗೂ ಬೌದ್ಧ ಮತ ಹೆಚ್ಚು ಪ್ರಾಮುಖ್ಯತೆ ಪಡೆಯಲು ಕಾರಣವಾದ ಅಂಶಗಳನ್ನು ಗುರುತಿಸಿರುವರು. ಈ ಮೂರು ಧರ್ಮಗಳ ತತ್ವಗಳನ್ನು ಸಮೀಕರಿಸಿ ಚರ್ಚಿಸುವ ಪ್ರಯತ್ನ ಕಂಡುಬರುವುದು. ಜೊತೆಗೆ ಇದು ನಿಯೋ-ಕನ್‌ಫ್ಯೂಷಿಯನ್ ಸಿದ್ಧಾಂತ ಬೆಳವಣಿಗೆಯಲ್ಲಿ ಹೇಗೆ ಪೂರಕಗೊಂಡಿತು ಎಂಬ ವಿವರಣೆ ನೀಡುವ ಪ್ರಯತ್ನವಿದೆ. ಏಳನೇ ಅಧ್ಯಾಯದಲ್ಲಿ ಟಿಬೆಟ್‌ನಲ್ಲಿ ಬೆಳೆದುಬಂದ ಬೌದ್ಧಧರ್ಮವೂ ಭಾರತ ಮತ್ತು ಚೀನಾ ಎರಡು ಪ್ರದೇಶಗಳಲ್ಲಿರುವ ಬೌದ್ಧ ಧರ್ಮಕ್ಕಿಂತ ಭಿನ್ನವಾಗಿರುವ ಹಾಗೂ ಪ್ರತ್ಯೇಕ ಅಸ್ತಿತ್ವ ಹೊಂದಿರುವುದನ್ನು ವಿವರಿಸಿರುವರು. ಎಂಟನೇ ಮತ್ತು ಒಂಭತ್ತನೇ ಅಧ್ಯಾಯಗಳಲ್ಲಿ ಬೌದ್ಧ ಧರ್ಮದಿಂದ ಕವಲೊಡೆದ ಹೊಸ ಶಾಖೆಗಳು, ಅದರ ಸ್ವರೂಪಗಳ ಬಿಂಬವನ್ನು ಕಾಣಬಹುದಾಗಿದೆ. ಇವೆಲ್ಲವುಗಳ ಪ್ರಭಾವದಿಂದಾಗಿ ವಾಸ್ತುಶಿಲ್ಪದ ಮೇಲೆ ಉಂಟಾದ ಬದಲಾವಣೆ, ಬೆಳವಣಿಗೆಗಳನ್ನು ಚರ್ಚಿಸಲಾಗಿದೆ. ಸೈನೋ-ಇಂಡಿಯನ್ ಶೈಲಿ ಬೆಳವಣಿಗೆಗೆ ಬೌದ್ಧ ಧರ್ಮ ಪ್ರಮುಖ ಸೆಲೆಯಾಗಿದ್ದನ್ನು ವಿವರಣಾತ್ಮಕವಾಗಿ ಚರ್ಚಿಸಿರುವರು. ಹಾಗೇ ವಾಸ್ತುಶಿಲ್ಪದಲ್ಲಿಯೂ ಟಿಬೆಟ್‌ನಲ್ಲಿ ಕಂಡುಬರುವ ಪ್ರತ್ಯೇಕತೆಯನ್ನು ಚರ್ಚಿಸಲಾಗಿದೆ. ಒಟ್ಟಾರೆಯಾಗಿ ಬೌದ್ಧ ಧರ್ಮ ಪಸರಿಸುವಿಕೆ, ಬೆಳವಣಿಗೆ ಹಾಗೂ ಪ್ರಬಲವಾಗಿ ರೂಪುಗೊಂಡ ಎಲ್ಲಾ ಹಂತಗಳನ್ನು ಧಾರ್ಮಿಕ ಚೌಕಟ್ಟಿನೊಳಗೆ ನೋಡುವ ಪರಿ ಕಂಡುಬರುವುದು.

* * *

ಭಾರತದೊಳಗೆ ಬೌದ್ಧ ಧರ್ಮದಲ್ಲಿ ಅನೇಕ ಬೆಳವಣಿಗೆಗಳನ್ನು ಹಲವು ಹಂತಗಳಲ್ಲಿ ಗುರುತಿಸಬಹುದಾಗಿದೆ. ಎರಡನೇ ಹಂತದಲ್ಲಿ ಕುಷಾನರ ಕಾಲದಲ್ಲಿ ಬೌದ್ಧ ಧರ್ಮದೊಳಗೆ ಉಂಟಾದ ಧಾರ್ಮಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗಳು ಹಾಗೂ ಬೌದ್ಧ ವಿಹಾರಗಳೊಂದಿಗೆ ಅವುಗಳ ಸಂಬಂಧ, ಧಾರ್ಮಿಕ ಸಿದ್ಧಾಂತಗಳ ಮುಖೇನ ತೀವ್ರವಾಗಿ ವ್ಯಾಪಾರಿ ಚಟುವಟಿಕೆಗಳನ್ನು ಪ್ರಭಾವಿಸಿತು. ಈ ಮುಖೇನ ದೂರದ ವ್ಯಾಪಾರ, ನಗರೀಕರಣ, ಬೌದ್ಧ ಮತದೊಳಗಿನ ಬೆಳವಣಿಗೆಗಳು ಮತ್ತು ಚೀನಾದಲ್ಲಿ ಬೌದ್ಧ ಧರ್ಮದ ಪ್ರಸರಣ ತೀವ್ರತೆಯನ್ನು ಪಡೆಯಿತು. ಇವೆಲ್ಲವೂ ಒಂದನ್ನೊಂದು ಆವರಿಸಿದೆಯಾದರೂ ಪ್ರತ್ಯೇಕವಾಗಿವೆ. ಸಮಕಾಲೀನವಾಗಿ ನಗರಗಳ ಆರ್ಥಿಕತೆ ಸ್ಥಿರವಾಗಿರಲು ಒಂದು ಪ್ರಮುಖ ಕಾರಣ ದೂರ ಮಾರ್ಗದ ವ್ಯಾಪಾರ. ಇದು ಉತ್ತರ ಭಾರತ ಮತ್ತು ಉತ್ತರ ಚೀನಾದಲ್ಲಿ ನಗರೀಕರಣ ಕೊನೆಗೊಂಡ ಸಂದರ್ಭದಲ್ಲಿಯೂ ಮುಂದುವರೆದಿರುವುದನ್ನು

ನೋಡಬಹುದು. ಈ ವ್ಯಾಪಾರವು ಬೌದ್ಧ ಧರ್ಮದೊಳಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯನ್ನು ಉತ್ತೇಜಿಸಲು ಮುಖ್ಯವಾದದ್ದು. ಹಾಗೇ ಈ ಹೊಸ ಬದಲಾವಣೆಗಳು ವ್ಯಾಪಾರವನ್ನು ಮತ್ತಷ್ಟು ಪ್ರಚೋದಿಸಿದವು. ಈ ಬದಲಾವಣೆಗಳನ್ನು ಸುಲಭವಾಗಿ ಗುರುತಿಸುವಷ್ಟು ಆಕರಗಳು ಇಲ್ಲದಿದ್ದರೂ ಭಾರತದಿಂದ ಚೀನಾದೆಡೆಗಿನ ಬೌದ್ಧ ಧರ್ಮದ ಪ್ರಸರಣವು ಒಂದು ಮಹತ್ವದ ಪ್ರಾಮುಖ್ಯತೆಯನ್ನು ಹೊಂದಿದೆ. ಕೃತಿಯಲ್ಲಿ ಧಾರ್ಮಿಕ ದೃಷ್ಟಿಕೋನವನ್ನೇ ಮುಖ್ಯವಾಗಿ ಹೊಂದಿರುವುದರಿಂದ ಅನೇಕ ಆಯಾಮಗಳನ್ನು ಗಮನಿಸಲು ಸಾಧ್ಯವಾಗಿಲ್ಲ. ಲೇಖಕರಾದ ಸಿ. ಚಂದ್ರಪ್ಪನವರು ಪಾಳಿ ಭಾಷೆ ಮತ್ತು ಸಾಹಿತ್ಯದ ಇತಿಹಾಸ (ಅನುವಾದ) (ಪು-iv) ಎಂಬ ವಿಚಾರದ ಕುರಿತು ಮೊದಲೇ ಅಧ್ಯಯನ ಮಾಡಿರುವುದರಿಂದ ಈ ಕೃತಿಯ ಕುರಿತು ಇನ್ನೂ ಹೆಚ್ಚಿನ ನಿರೀಕ್ಷೆ ಸಹಜವಾಗಿ ಇರುವುದು. ಬುದ್ಧರುಚಿಯೆಂಬ ಭಿಕ್ಷು ಕರ್ನಾಟಕದ ಬಾದಾಮಿಯಿಂದ ಚಾಲುಕ್ಯರ ಕಾಲದಲ್ಲಿ ಚೀನಾಕ್ಕೆ ತೆರಳಿದ್ದ. ಇಂತವರ ಮೇಲೆ ಬೆಳಕು ಚೆಲ್ಲಬಹುದಾಗಿತ್ತು. ಇದರೊಡನೆ ಕೃತಿಯಲ್ಲಿ ಕೆಲವೆಡೆ ವಿವರಗಳನ್ನು ಹೇಳುವಾಗ ಕ್ರಮಬದ್ಧತೆ ಕಂಡುಬರುವುದಿಲ್ಲ. ಅಲ್ಲದೇ ಕೃತಿಯಲ್ಲಿ ಎಲ್ಲೆಡೆ ಮುದ್ರಾ ರಾಕ್ಷಸನ ವಿರಾಟ ಸ್ವರೂಪವೇ ದರ್ಶನವಾಗುವುದು. ಇವು ಓದುಗರಿಗೆ ಕಿರಿಕಿರಿ ಉಂಟುಮಾಡುವುದು. ಜೊತೆಗೆ ಕೃತಿಯಲ್ಲಿ ನೀಡಿರುವ ಗ್ರಂಥಸೂಚಿ ಅಸಂಮಜಸವಾಗಿದ್ದು, ಅಪರಿಪೂರ್ಣವಾಗಿದೆ. ಆದರೆ ಕೃತಿಯಲ್ಲಿ ಬಳಸಿರುವ ಭಾಷೆ ಸೊಗಸಾಗಿದ್ದು ಓದಲು ಪ್ರೇರೇಪಿಸುವುದು.

ಈ ಕೃತಿಯಲ್ಲಿ ಚೀನಿಯರು ಬೌದ್ಧ ಧರ್ಮದ ಮೇಲೆ ಪ್ರಸ್ತುತ ಹೊಂದಿರುವ ಸಂಪೂರ್ಣ ಅಧಿಪತ್ಯವನ್ನು ಅಲ್ಲಲ್ಲಿ ಪ್ರಶ್ನಿಸುವುದನ್ನು ಕಾಣಬಹುದು. ಓದುಗರು ಸುಲಭವಾಗಿ ಲೇಖಕರು ಬೌದ್ಧ ಧರ್ಮದೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿರುವುದನ್ನು ಗುರುತಿಸಬಹುದಾಗಿದೆ. ಈ ದಿಶೆಯಲ್ಲಿ ಪ್ರಸ್ತುತ ಸಮಾಜದಲ್ಲಿ ದಲಿತ ವರ್ಗದಿಂದ ನವಬೌದ್ಧರಾದವರ ಭಾವನೆಗಳು, ಸಂಘರ್ಷ, ಅಸ್ಮಿತೆಯ ಹುಡುಕಾಟ ಮುಖ್ಯವಾಗಿ ಕಾರ್ಯನಿರ್ವಹಿಸಿರುವಂತೆ ಕಾಣುವುದು. ಈ ಕೃತಿಯೊಳಗಿರುವ ಹಲವು ಲೋಪದೋಷಗಳ ನಡುವೆಯೂ ಚೀನಾದಲ್ಲಿನ ಬೌದ್ಧ ಧರ್ಮದ ಕೆಲವು ನೆಲೆಗಳನ್ನಾದರೂ ಪರಿಚಯಿಸುವಲ್ಲಿ ತಕ್ಕಮಟ್ಟಿಗೆ ಕೃತಿ ಯಶಸ್ವಿಯಾಗಿದೆ. ವಿಶ್ಲೇಷಣೆಯ ಬದಲು ವಿವರಣೆಯೇ ಪ್ರಧಾನವಾದ ಈ ಕೃತಿಯು ಗಂಭೀರ ಓದುಗರ ಗಮನಸೆಳೆಯುವಲ್ಲಿ ವಿಫಲವಾದರೂ, ಸಾಮಾನ್ಯ ಓದುಗರನ್ನು ಆಕರ್ಷಿಸಬಲ್ಲದು. ಚೀನಾದಲ್ಲಿನ ಬೌದ್ಧ ಧರ್ಮ ಕುರಿತು ಕನ್ನಡದಲ್ಲಿ ಬಂದಿರುವ ಬಹುಶಃ ಮೊದಲ ಕೃತಿ ಇದೆಂಬುದೇ ಇದರ ಹೆಚ್ಚುಗಾರಿಕೆ. ■

**ಅಭಿನಂದನೆಗಳು...**

ಇತಿಹಾಸ ದರ್ಪಣದ ಉಪ ಸಂಪಾದಕರಾದ **ರಶ್ಮಿ ಎಸ್.** ಅವರು ಪ್ರಾಧ್ಯಾಪಕರಾದ ವಿಜಯ್ ಪೂಣಚ್ಚ ತಂಬಂಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಕರ್ನಾಟಕದಲ್ಲಿ ತುರ್ತು ಪರಿಸ್ಥಿತಿಯ ಪ್ರಭಾವ ಮತ್ತು ಪರಿಣಾಮಗಳು ಎಂಬ ಪ್ರೌಢ ಪ್ರಬಂಧಕ್ಕೆ ಹಂಪಿ ಕನ್ನಡ ವಿಶ್ವವಿದ್ಯಾನಿಲಯವು ಡಾಕ್ಟರೇಟ್ ಪದವಿಯನ್ನು ನೀಡಿದೆ. ಈ ಸಂದರ್ಭದಲ್ಲಿ ಇತಿಹಾಸ ದರ್ಪಣ ಬಳಗವು ರಶ್ಮಿ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

-ಸಂ.

# ದಕ್ಷಿಣ ಭಾರತ ಇತಿಹಾಸ -ಒಂದು ಮರು ಅವಲೋಕನ

-ಪುರುಷೋತ್ತಮ್ ಎಸ್.
ಸಂಶೋಧನಾ ಸಹಾಯಕರು, ಇಂದಿರಾಗಾಂಧಿ ರಾಷ್ಟ್ರೀಯ ಕಲಾಕೇಂದ್ರ,
ದಕ್ಷಿಣ ಪ್ರಾದೇಶಿಕ ಕಛೇರಿ, ಬೆಂಗಳೂರು-560056




A Concise History Of South India-
Issues and Interpretations

Ed. Noboru Karashima

Publisher : Oxford University Press

Pages : 416 Price : Rs. 995/-

First Edition : 2014

ಖ್ಯಾತ ಇತಿಹಾಸಕಾರರಾದ ನೊಬೊರು ಕರಾಶಿಮಾ ಅವರ ಸಂಪಾದಕತ್ವದಲ್ಲಿ ಹೊರಬಂದಿರುವ ಈ ಕೃತಿ ದಕ್ಷಿಣ ಭಾರತದ ಪ್ರಾಗೈತಿಹಾಸ ಕಾಲದಿಂದ ಸಮಕಾಲೀನ ಇತಿಹಾಸದವರೆಗೆ ಸಂಕ್ಷಿಪ್ತವಾಗಿ ಆದರೆ ವೈಧಾನಿಕವಾಗಿ ಹೊಸ ವಿಚಾರ ಮತ್ತು ವಿಶ್ಲೇಷಣೆಗಳನ್ನು ಹೊಂದಿರುವಂತಹದ್ದು. ಈ ಆವೃತ್ತಿಯು ದಕ್ಷಿಣ ಭಾರತದ ಪ್ರಾದೇಶಿಕ ಅಧ್ಯಯನದಲ್ಲಿ ಆಗಿರುವ ಹೊಸ ಅನ್ವೇಷಣೆಗಳ ಮೂರ್ತ ರೂಪವಾಗಿದೆ. ಪ್ರಸಕ್ತ ಆವೃತ್ತಿ ಕಾಲಾನುಕ್ರಮಣಿಕೆಯ ವಿದ್ಯಮಾನಗಳನ್ನು ಪರಿಶೀಲಿಸುವುದರ ಜೊತೆಗೆ ದಕ್ಷಿಣ ಭಾರತದ ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಯನ್ನು ಐತಿಹಾಸಿಕ ಪ್ರಗತಿಯೊಂದಿಗೆ ಸಮರ್ಪಕವಾಗಿ ವಿಶ್ಲೇಷಿಸಿದೆ. ಆರಂಭಿಕ ಮಾನವ ಆವಾಸ ಕೇಂದ್ರಗಳ ಉಗಮ, ಪ್ರಾಚೀನ ಸಾಮ್ರಾಜ್ಯಗಳ ರಚನೆ, ಕೃಷಿ ವಲಯದಲ್ಲಿ ಕಂಡು ಬಂದ ಪ್ರಗತಿ, ಧಾರ್ಮಿಕ ಚಳುವಳಿಗಳು ಮತ್ತು ಮಧ್ಯಕಾಲದ ವೇಳೆಗೆ ಕೇಂದ್ರೀಕೃತ ರಾಜ್ಯ ವ್ಯವಸ್ಥೆಗಳು ಭದ್ರವಾಗಿ ನೆಲೆಗೊಂಡ ಬಗೆ- ಪೂರ್ವ ಮತ್ತು ಪಾಶ್ಚಾತ್ಯ ದೇಶಗಳ ನಡುವೆ ಏರ್ಪಟ್ಟ ಸಾಗರೋತ್ತರ ವ್ಯಾಪಾರ ಸಂಪರ್ಕದಿಂದಾಗಿ ಬೆಳವಣಿಗೆಗೊಂಡ ದೇಶೀಯ ಉದ್ಯಮ; ಆಧುನಿಕ ಪೂರ್ವಕಾಲದ ರಾಜ್ಯ ರಚನೆ; ಬ್ರಿಟಿಷರಿಂದ ಪರಿಚಿತಗೊಂಡ ರೈತವಾರಿ ಮತ್ತು ಜಮೀನುದಾರಿ ಪದ್ಧತಿಗಳ ಪ್ರಭಾವಗಳು; ಕ್ರಿ.ಶ.18ನೇ ಶತಮಾನದಲ್ಲಿ ದಕ್ಷಿಣ ಭಾರತ ಪ್ರಾದೇಶಿಕ ಆರ್ಥಿಕ ವ್ಯವಸ್ಥೆಯ ಅಭಿವೃದ್ಧಿ ಮೇಲಿನ ವಾಗ್ವಾದಗಳು; ಕೇರಳ ಭಾಗದಲ್ಲಿ ಮಾತೃಪ್ರಧಾನ ವ್ಯವಸ್ಥೆಯ ಅವನತಿ; ದ್ರಾವಿಡ ಚಳುವಳಿಗಳ ಉಗಮ; ಸಮಕಾಲ ಸಂಸ್ಕೃತಿಯಲ್ಲಿ ರಾಜಕೀಯ ಮಧ್ಯಪ್ರವೇಶ- ಇತ್ಯಾದಿ ವಿಚಾರಧಾರೆಗಳನ್ನು ಈ ಕೃತಿಯಲ್ಲಿ ಪ್ರಸ್ತಾಪಿಸುತ್ತದೆ.

ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್ ಹೊರ ತಂದಿರುವ ಈ ಅಂದವಾದ ಆವೃತ್ತಿಯು ನಕ್ಷೆ, ಕೋಷ್ಟಕಗಳು ಮತ್ತು ಹೊಸ ಪ್ರಾಕ್ತನ ಆಧಾರ ಹಾಗೂ ಹೊಸ ಐತಿಹಾಸಿಕ ವಿಶ್ಲೇಷಣೆಗಳನ್ನು ಹೊಂದಿದ್ದು, ಸಮಗ್ರ ಪ್ರದೇಶದ ಸಮುದಾಯಗಳ, ಆಡುಭಾಷೆಗಳ ಮತ್ತು ವಿವಿಧ ಸಂಸ್ಕೃತಿಗಳ ಬಗೆಗೆ ವಿನೂತನ ಚರ್ಚೆಗಳನ್ನು ಇಲ್ಲಿ ಮಾಡಲಾಗಿದೆ.

ಕೆ.ಎ. ನೀಲಕಂಠಶಾಸ್ತ್ರಿಯವರ *A History of South India* 1955 ರಲ್ಲಿ ಹೊರಬಂದ ಬಳಿಕ ದಕ್ಷಿಣ ಭಾರತದ ಸಮಗ್ರ ಇತಿಹಾಸವನ್ನು ಕಟ್ಟಿಕೊಡುವ ಮತ್ತೊಂದು ಕೃತಿ ಪ್ರಕಟಗೊಳ್ಳಲಿಲ್ಲ. ಕಳೆದ ಒಂದೆರೆಡು ದಶಕದಲ್ಲಿ ಹೆಸರಾಂತ ಇತಿಹಾಸಕಾರರಾದ ಆರ್.ಚಂಪಕಲಕ್ಷ್ಮಿ, ರಾಜನ್ ಗುರುಕ್ಕಲ್, ಕೇಶವನ್ ವೆಳುತಟ್, ನೊಬೊರು ಕರಾಶಿಮಾ, ಪಿ.ಶಣ್ಮುಗಂ, ಸಿಂಥಿಯಾ ಟಾಲ್ಬೊಟ್ ಮತ್ತು ವೈ.ಸುಬ್ಬರಾಯಲು ರವರ ಸಂಶೋಧನಾ ಕೃತಿಗಳು ದಕ್ಷಿಣ ಭಾರತ ಕೇಂದ್ರಿತ ಅಧ್ಯಯನಗಳಾಗಿದ್ದರೂ, ಸಮಗ್ರ ದಕ್ಷಿಣ ಭಾರತದ ಇತಿಹಾಸವನ್ನು ಕಟ್ಟಿಕೊಡುವುದು ಅವುಗಳ ಉದ್ದೇಶವಾಗಿರಲಿಲ್ಲ. ಬಹುತೇಕ ಶಾಸನಗಳ ಮೇಲೆ ಅವಲಂಬಿಸಿ ಹೊರ ಬಂದ ಈ ಕೃತಿಗಳ ಮೂಲ ಆಶಯ ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ವಲಯಗಳಲ್ಲಿ ಕಂಡುಬಂದ ಸಂಚಲನೆಗಳನ್ನು ಗುರುತಿಸಿ, ಓದುಗರಿಗೆ ಮನದಟ್ಟಾಗುವ ರೀತಿಯಲ್ಲಿ ಅವುಗಳನ್ನು ವಿಶ್ಲೇಷಿಸುವುದಾಗಿತ್ತು. ಈ ನಿಟ್ಟಿನಲ್ಲಿ ಈ ಎಲ್ಲ ವಿದ್ವಾಂಸರ ಪರಿಶ್ರಮದ ಫಲವಾಗಿ ಸಾಮಾಜಿಕ ಸಂರಚನೆ ಮತ್ತು ಆರ್ಥಿಕ ವಲಯದಲ್ಲಿ ಚಲಾವಣೆಯಲ್ಲಿದ್ದ ಅನೇಕ ನುಡಿಗಟ್ಟು ಮತ್ತು ಪರಿಕಲ್ಪನೆಗಳನ್ನು ಇತಿಹಾಸದುದ್ದಕ್ಕೂ ಕಂಡುಬಂದ ಅವುಗಳ ಉಲ್ಲೇಖಗಳನ್ನು ಜಾಲಾಡಿ, ಆ ನಿರ್ಧಿಷ್ಟ ಪರಿಕಲ್ಪನೆಗಳನ್ನು ವೈಜ್ಞಾನಿಕ ಮತ್ತು ವೈಧಾನಿಕವಾಗಿ ವಿಶ್ಲೇಷಣೆಗೊಂಡಿವೆ.

ಒಟ್ಟಾರೆ ಇವರ ಎಲ್ಲ ಬರವಣಿಗೆಗಳು ಇತ್ತೀಚಿನ ವರ್ಷಗಳಲ್ಲಿ ಹೊರಬಂದಿದ್ದು, ನೂತನ ವಿಚಾರ ಧಾರೆಗಳೊಂದಿಗೆ, ದಕ್ಷಿಣ ಭಾರತದ ಒಂದಿಲ್ಲೊಂದು ಪ್ರದೇಶದ ಒಂದಿಲ್ಲೊಂದು ಮಗ್ಗುಲನ್ನು ವಿಸ್ತಾರವಾಗಿ, ಸೂಕ್ಷ್ಮವಾಗಿ ಒಂದು ಹೊಸ ವೈಧಾನಿಕ ಮಾದರಿಯಲ್ಲಿ ಅಧ್ಯಯನಿಸಿರುವಂತಹವುಗಳಾಗಿವೆ.

ಪ್ರಾಗೈತಿಹಾಸದ ಹಳೆಶಿಲಾಯುಗದಿಂದ ಹಿಡಿದು 20ನೇ ಶತಮಾನದ ವರೆಗಿನ ಐತಿಹಾಸಿಕ ಬೆಳವಣಿಗೆಗಳನ್ನು ಎಂಟು ಅಧ್ಯಾಯಗಳಲ್ಲಿ ಈ ಆವೃತ್ತಿಯು ತಿಳಿಸಿಕೊಡುತ್ತದೆ. ಪಿ.ಷಣ್ಮುಗಂ ರವರು ಮೊದಲ ಅಧ್ಯಾಯ 'Before the Common Era : Beginnings of South Indian History'– ಇದರಲ್ಲಿ ಪ್ರಾಗೈತಿಹಾಸದ– ಹಳೆಶಿಲಾಯುಗ, ಮಧ್ಯ ಶಿಲಾಯುಗ ಮತ್ತು ನವ ಶಿಲಾಯುಗ– ಕಾಲಘಟ್ಟಗಳನ್ನು ಸರಳವಾಗಿಯೇ ಮಂಡಿಸಿದ್ದು, ಪ್ರತಿಕಾಲಘಟ್ಟ ತೆಗೆದುಕೊಂಡ ಬದಲಾವಣೆಗಳನ್ನು ತಿಳಿಸಿಕೊಟ್ಟಿದ್ದಾರೆ. ಹಾಗೆಯೇ, ವೈ.ಸುಬ್ಬರಾಯಲು ರವರು ಈ ಮೊದಲ ಮತ್ತು ಎರಡನೇ ಅಧ್ಯಾಯದಲ್ಲಿ ಮಧ್ಯಯುಗದ ಸಮಾಧಿಗಳು, ಆ ಕಾಲದ ಚಿತ್ರಕಲೆ, ಬ್ರಾಹ್ಮಿಲಿಪಿ ಮತ್ತು ದಕ್ಷಿಣ ಭಾರತದ ಭಾಷೆಗಳು, ಶಾತವಾಹನರು, ಸಂಗಮ ಮತ್ತು ಸಂಗಮ ನಂತರ ಕಾಲಘಟ್ಟದ ರಾಜ್ಯವ್ಯವಸ್ಥೆ, ಧರ್ಮ ಮತ್ತು ಧಾರ್ಮಿಕ ಸ್ಮಾರಕಗಳ ಮೇಲೆ ಅಧ್ಯಯನ ಕೈಗೊಂಡಿದ್ದಾರೆ. ಮಧ್ಯಯುಗೀನ ಜನರ ಆವಾಸ ಕೇಂದ್ರಗಳಲ್ಲಿ ಮತ್ತು ಸಮಾಧಿ ಸ್ಥಳಗಳಲ್ಲಿ ಬಳಸಲಾಗುತ್ತಿದ್ದ ಎಲ್ಲ ವಿಧದ

ಮಡಕೆಗಳ ಮೇಲಿನ ಬರಹ, ಚಿಹ್ನೆ ಇಲ್ಲವೆ, ರೇಖಾಚಿತ್ರಗಳು ಬೇರೆ ಬೇರೆ ಮತ್ತು ಅತಿದೂರದ ಸ್ಥಳಗಳಲ್ಲಿ ದೊರೆತಿರುವ ಇದೇ ಬಗೆಯ ಬರವಣಿಗೆಗಳ ಜೊತೆಗೆ ತುಲನಾತ್ಮಕ ಅಧ್ಯಯನ ನಡೆಸಿದ್ದು, ಅವುಗಳ ಸಾಮ್ಯತೆಯ ಆಧಾರದ ಮೇಲೆ ಒಂದು ಸಂಸ್ಕೃತಿಯ ಇಲ್ಲವೆ ಧಾರ್ಮಿಕ ಸಂಕೇತಗಳನ್ನು ತಿಳಿಸುವ ಗುರುತುಗಳೆಂದು ಅಭಿಪ್ರಾಯ ಪಡುತ್ತಾರೆ. ಇನ್ನು ಬ್ರಾಹ್ಮಿ ಲಿಪಿಯ ಬಗೆಗೆ ನಡೆಸಿರುವ ಅಧ್ಯಯನ ಫಲವಾಗಿ, ದಕ್ಷಿಣದಲ್ಲಿ ಬ್ರಾಹ್ಮಿ ಬರವಣಿಗೆಯ ಕುರುಮಗಳು ಕಂಡು ಬರುತ್ತಿರುವುದು ವಾಣಿಜ್ಯ ಮತ್ತು ವಿನಿಮಯ ವಹಿವಾಟಿನ ಕೇಂದ್ರ, ರಾಜಕೀಯ ಕೇಂದ್ರ ಹಾಗೂ ಜೈನ ಕೇಂದ್ರಗಳಲ್ಲಿ ಎಂಬುದನ್ನು ತಿಳಿಸುತ್ತಾ, ಬ್ರಾಹ್ಮಿ ಬರವಣಿಗೆ ಇಲ್ಲಿ ಹರಡಿದ್ದು, ವ್ಯಾಪಾರ-ವಹಿವಾಟು, ಧಾರ್ಮಿಕ ಮತ್ತು ರಾಜಕೀಯ ಉದ್ದೇಶಗಳಿಗೊಸ್ಕರ ಎಂಬುದನ್ನು ವಿಶ್ಲೇಷಿಸಿದ್ದಾರೆ.

ಎರಡನೇ ಅಧ್ಯಾಯದಲ್ಲಿ ಶಾತವಾಹನರ ರಾಜ್ಯ ಮತ್ತು ಸಂಗಮ್ ಮತ್ತು ಸಂಗಮೋತ್ತರ ಆರಂಭಿಕ ತಮಿಳು ರಾಜ್ಯ ನಡುವಿನ ತುಲನಾತ್ಮಕ ಅಧ್ಯಯನ, ಧಾರ್ಮಿಕ ಸ್ಮಾರಕ ಹಾಗೂ ಅಂದಿನ ಇಂಡೊ-ರೋಮನ್ ನಡುವಿನ ವ್ಯಾಪಾರ ಸಂಪರ್ಕದಿಂದ ಆದ ಆರ್ಥಿಕ ಪ್ರಗತಿಯನ್ನು ಪರಿಣಾಮಕಾರಿಯಾಗಿ ಪ್ರಸ್ತುತ ಪಡಿಸಿದ್ದಾರೆ. ಜೊತೆಗೆ ಕ್ರಿ.ಶ.3ನೇ ಶತಮಾನದ ಬಳಿಕ ದಕ್ಷಿಣ ಭಾರತದಲ್ಲಿ ತಲೆ ಎತ್ತಿದ ಕದಂಬ, ಚೇದಿ, ಗಂಗ, ಪಲ್ಲವ ಹಾಗೂ ಇತರ ಅನೇಕ ಸಣ್ಣ ಸಣ್ಣ ಸಂಸ್ಥಾನಗಳು ತಮ್ಮ ರಾಜನೀತಿಯಲ್ಲಿ ಅಶ್ವಮೇಧ, ವಾಜಪೇಯ, ರಾಜಸೂಯ ಮತ್ತು ಹಿರಣ್ಯಗರ್ಭದಂತಹ ವೈದಿಕ ರಾಜತ್ವ ದತ್ತ ಒಲವು ತೋರಿದ ಪರಿಯನ್ನು ಪ್ರೊ.ಸುಬ್ಬರಾಯಲು ವಿಶ್ಲೇಷಿಸುತ್ತಾರೆ.

ಈ ಆವೃತ್ತಿಯ ಎರಡನೇ ಅಧ್ಯಾಯದಲ್ಲಿ ಬರುವ ರೋಮನ್ನರ ವ್ಯಾಪಾರ-ವಹಿವಾಟು ಮತ್ತು ದಕ್ಷಿಣ ಭಾರತವು ಆಗ್ನೇಯ ಏಷ್ಯಾದೊಂದಿಗೆ ಹೊಂದಿದ್ದ ಸಂಪರ್ಕ-ಈ ವಿಷಯ ಚರ್ಚೆಯಿಂದ ಆರಂಭವಾಗಿ ಮುಂದಿನ ನಾಲ್ಕು ಅಧ್ಯಾಯಗಳಲ್ಲಿ ಕ್ರಿ.ಶ.6ನೇ ಶತಮಾನದಿಂದ ಕ್ರಿ.ಶ.17ನೇ ಶತಮಾನದವರೆಗಿನ ವಿವಿಧ ವಿಷಯಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿರುವ ನೊಬೊರು ಕರಾಶಿಮಾರವರು- ಕ್ರಿ.ಶ.6ನೇ ಶತಮಾನದ ಹೊಸ ರಾಜ್ಯಗಳ ಉದಯ; ರಾಜತ್ವ ಮತ್ತು ಆಡಳಿತ; ಕೃಷಿ ಬೆಳವಣಿಗೆ; ಭಕ್ತಿ ಚಳುವಳಿ ಮತ್ತು ರಾಜ್ಯ ಸಂಬಂಧ; ಕ್ರಿ.ಶ.10-12ನೇ ಶತಮಾನದ ಚೋಳ ಮತ್ತು ಕಲ್ಯಾಣ ಚಾಳುಕ್ಯ ರಾಜ್ಯಗಳು ನಡೆಸಿದ ರಾಜಕೀಯ ಪೈಪೋಟಿ; ಚೋಳ ರಾಜ್ಯ ವ್ಯವಸ್ಥೆ; ಕೃಷಿ ವಲಯದಲ್ಲಿ ಕಂಡುಬಂದ ಬದಲಾವಣೆಗಳು; ವ್ಯಾಪಾರ-ವಹಿವಾಟು; ದಖನ್ ಮತ್ತು ಕೇರಳಾದ ರಾಜಕೀಯ ವ್ಯವಸ್ಥೆ; ಕ್ರಿ.ಶ.13ನೇ ಶತಮಾನದ ವೇಳೆಗೆ ಹಳೆಯ ರಾಜ ಸಂತತಿಗಳು ಅವನತಿಗೊಂಡ ಬಗೆ; ಹೊಸ ಜಾತಿ ಸಮುದಾಯಗಳ ಉದಯ; ನಂತರ ವಿಜಯನಗರ, ದಖನಿ ಸುಲ್ತಾನರು ಮತ್ತು ನಾಯಕ ಮನೆತನಗಳ ರಾಜನೀತಿ; ಈ ಕಾಲದ ವ್ಯಾಪಾರ, ಉದ್ದಿಮೆ ಮತ್ತು ಧಾರ್ಮಿಕ ವ್ಯವಸ್ಥೆ-ಹೀಗೆ ಹತ್ತು ಹಲವಾರು ವಿಷಯಗಳ ಮೇಲೆ ಅಧ್ಯಯನ ಕೈಗೊಂಡು ಹೊಸ, ಹೊಸ ವಿನೂತನ ವಿಚಾರಗಳನ್ನು ಅತ್ಯಂತ ಸಮರ್ಪಕವಾಗಿ ವಟ್ಟ ಮಾಹಿತಿಯೊಂದಿಗೆ ವಿಶ್ಲೇಷಿಸುತ್ತಾರೆ.

ಟಾಲೆಮಿಯ ಜಿಯಾಗ್ರಫಿ ಕೃತಿಯಲ್ಲಿನ ಕ್ರಿ.ಶ.1ನೇ ಶತಮಾನದ ಪಶ್ಚಿಮ ಕರಾವಳಿಯ ಬಂದರುಗಳನ್ನು ಸೂಚಿಸುವ ನಕ್ಷೆಯನ್ನು ಮತ್ತೆ ಕ್ರಿ.ಶ.1511 ರಲ್ಲಿ ಇಟಲಿಯ ವೆನಿಸ್ ನಲ್ಲಿ ಮರು ಪ್ರಕಟಿಸಿದ– *Map of India in Geographia by Ptolemaios*, Pub. In 1511 in Venice– ಹಾಗೂ ಮುಜ್ಜಿರಿಸ್ ಸೇರಿದಂತೆ ದಕ್ಷಿಣ ಭಾರತದ ಇತರ ಪಶ್ಚಿಮ ತೀರ ಬಂದರು ಪ್ರದೇಶಗಳು ರೋಮ್ ಮತ್ತು ಪ್ರಾಚೀನ ಅಲೆಕ್ಸಾಂಡ್ರಿಯಾ ಜೊತೆ ಹೊಂದಿದ್ದ ವ್ಯಾಪಾರ–ವಹಿವಾಟಿನ ಸಂಪರ್ಕವನ್ನು ಸಂಗಮ್ ಸಾಹಿತ್ಯ ಮತ್ತು ಅನಾಮಧೇಯ ಗ್ರೀಕ್ ಕೃತಿ ಪೆರಿಪ್ಲಸ್ ಮೆರಿಸ್ ಎರಿತ್ರಿಯನ್ನಿಯಲ್ಲಿ ಬರುವ ಉಲ್ಲೇಖಗಳು, ವಿಯೆನ್ನಾ ವಸ್ತು ಸಂಗ್ರಹಾಲಯದಲ್ಲಿ ಇತ್ತೀಚಿಗೆ ದೊರೆತ ಕ್ರಿ.ಶ.2ನೇಶತಮಾನದ ಲಿಪಿಯುಳ್ಳ ಪ್ಯಾಪಿರಸ್ ಕಾಗದ ಬರವಣಿಗೆ ಹಾಗೂ ಮಾರ್ಟಿಮರ್ ವೀಲರ್, ವಿ.ಘೋಷ್ ಮತ್ತು ಕೃಷ್ಣದೇವ ರವರು 1945 ರಲ್ಲಿ 'ಅರಿಕಮೇಡು'ವಿನಲ್ಲಿ ಉತ್ಖನನಗಳನ್ನು ನಡೆಸಿ ರಚಿಸಿರುವ 'Arikamedu : An Indo-Roman Trading Station on the East coast of India' ಲೇಖನವನ್ನೂ ಬಳಸಿಕೊಂಡು ವಿಶ್ಲೇಷಿಸಿದ್ದಾರೆ. ಅಂತೆಯೇ, 'ಓಸಿಯೊ'ನಲ್ಲಿ ದೊರೆತ ಬುದ್ಧನ ವಿಗ್ರಹ; ಚೀನಿಯರ ಹೊಡೆದ ಕಂಚಿನ ಕನ್ನಡಿ; ರೋಮನ್ ಮುದ್ರೆಯುಳ್ಳ ವೃತ್ತಾಕಾರದ ಬಿಲ್ಲೆ; ವಿಯೆಟ್ನಾಮಿನ ಮಿಕಾಂಗ್ ನದಿ ತಪ್ಪಲಿನಲ್ಲಿ ಪತ್ತೆಯಾದ ಮುದ್ರೆಗಳನ್ನುಳ್ಳ ಲೋಹದ ಬಿಲ್ಲೆಗಳು; ಬೆಲೆಬಾಳುವ ಹರಳುಗಳು; ಇಂಡೋನೇಷಿಯಾ ಜಕಾರ್ತದ ವಸ್ತು ಸಂಗ್ರಹಾಲಯದಲ್ಲಿರುವ ಕುಟೀ ಶಿಲಾ ಶಾಸನ ಹಾಗೆಯೇ, ದಕ್ಷಿಣ ಬ್ರಾಹ್ಮಿ ಲಿಪಿಯಲ್ಲಿರುವ ಪಶ್ಚಿಮ ಜಾವಾದ ಬೊಗರ್ ನಲ್ಲಿ ದೊರೆತಿರುವ ಶಿಲಾ ಶಾಸನ– ಈ ಅಪರೂಪದ ಪ್ರಾಕ್ತನ ಮತ್ತು ಶಿಲಾ ಶಾಸನಗಳ ಸಹಾಯದಿಂದ ಕರಾಶಿಮಾರವರು ಆಗ್ನೇಯ ಏಷ್ಯಾದ ರಾಜ್ಯ ರಚನೆಯಲ್ಲಿ ದಕ್ಷಿಣ ಭಾರತ ಹೊಂದಿದ್ದ ಪಾತ್ರವನ್ನು ಮತ್ತು ಸಾಂಸ್ಕೃತಿಕ ಒಡನಾಟವನ್ನು ಗುರುತಿಸಿದ್ದಾರೆ.

ಮೂರನೇ ಅಧ್ಯಾಯದಲ್ಲಿ 'ಆರನೇ ಶತಮಾನದಿಂದ ಒಂಬತ್ತನೆ ಶತಮಾನದವರೆಗೆ ಬರುವ ಹೊಸರಾಜ್ಯಗಳ ಉದಯ, ಪ್ರಮುಖವಾಗಿ ಬಾದಾಮಿ ಚಾಳುಕ್ಯರು ಮತ್ತು ಪಲ್ಲವರ ಏಳಿಗೆ; ಈ ಎರಡು ರಾಜ್ಯ ಪ್ರಭುತ್ವಗಳು ತಮ್ಮ ಪ್ರಬಲ ಏಳಿಗೆಗಾಗಿ ನಡೆಸಿದ ಪೈಪೋಟಿಗಳು; ನಂತರ ದಕ್ಷಿಣ ಭಾರತದಲ್ಲಿ ರಾಷ್ಟ್ರಕೂಟರು ಏಳಿಗೆಗೆ ಬಂದದ್ದು; ಈ ಅವಧಿಯಲ್ಲಿ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದ ಈ ರಾಜ ಮನೆತನಗಳ ರಾಜನೀತಿಯ ಸಾಮಾನ್ಯ ಲಕ್ಷಣಗಳು ಉತ್ತರ ಭಾರತದ ರಾಜ ಮನೆತನಗಳಂತೆಯೇ, ಹಿಂದೂ ಧರ್ಮ. ಹಿಂದೂ ಯಾಗಗಳನ್ನು ಆಚರಿಸಿ, ತಮ್ಮ ರಾಜತ್ವವನ್ನು ನ್ಯಾಯಸಮ್ಮತಗೊಳಿಸಿಕೊಂಡ ಪ್ರವೃತ್ತಿ ಮತ್ತು ಈ ಅವಧಿಯಲ್ಲಿ ಭಕ್ತಿ ಚಳುವಳಿಗಳ ಶೀಘ್ರ ಉಗಮ ಮತ್ತು ವ್ಯಾಪಕವಾಗಿ ಪ್ರಸರಣಗೊಂಡದ್ದು, ರಾಜ್ಯದೊಂದಿಗೆ ಅವು ಹೊಂದಿದ್ದ ಸಂಪರ್ಕ– ಹೀಗೆ ಒಟ್ಟಾರೆ ಈ ಕಾಲಾವಧಿಯಲ್ಲಿ ಅನೇಕ ತೆರನಾದ ಮೂರ್ತ ಸ್ವರೂಪದ ಬದಲಾವಣೆಗಳು ಕಂಡು ಬರುತ್ತಿವೆ. ಆರ್ಥಿಕ ಅಗತ್ಯಗಳಿಗಾಗಿ ರೂಪ ತಳೆದ ಸಾಮಾಜಿಕ ಸಂರಚನೆ– ಈ ಸಾಮಾಜಿಕ ಸಂರಚನೆಯಿಂದಾಗಿ, ಕೃಷಿಯಲ್ಲಿ ಪ್ರಗತಿ ಕಂಡುಬಂದಿತು. ಕೃಷಿ ವಲಯದಲ್ಲಿ ಕಂಡುಬಂದ ಏತೇಚ್ಛ ಹೆಚ್ಚುವರಿ ಉತ್ಪನ್ನ, ರಾಜ್ಯ ರಚನೆಗೆ ಕಾರಣವಾಗಿ– ರಾಜಕೀಯ ಶಕ್ತಿಯನ್ನು ಪ್ರಬಲಗೊಳಿಸಲು ಅದಕ್ಕೆ ಪೂರಕವಾಗಿ, ಅನುವಾದ ಹಿಂದೂ ಧರ್ಮದ ಯಾಗ ಆಚರಣೆ –ಹೀಗೆ ಹಿಂದೂ ಧರ್ಮವು ರಾಜ್ಯಧರ್ಮವಾಗಿ ನ್ಯಾಯ ಸಮ್ಮತಗೊಳಿ

ಕೊಂಡದ್ದು– ಇವೆಲ್ಲವು ಒಂದಕ್ಕೊಂದು ಅಂತರ್ಸಂಬಂಧವನ್ನು ಹೊಂದಿರುವ ವಿದ್ಯಮಾನಗಳು– ಹೀಗೆ ಈ ಕಾಲಾವಧಿಯಲ್ಲಿ ಸಂಸ್ಥಾನಿಕ ರಾಜ ಪದ್ಧತಿಯಿಂದ ಸಂಪೂರ್ಣವಾದ ಸಾಮ್ರಾಜ್ಯ ಉಗಮಗೊಂಡಿತು– ಎನ್ನುವ ರಾಜನ್ ಗುರುಕ್ಕಲ್ ರವರ ವಾದವನ್ನೆ ಕರಾಶಿಮಾರವರು ಬೆಂಬಲಿಸಿ, ಪ್ರತಿಪಾದಿಸಿರುವುದೇ ಈ ಅಧ್ಯಾಯದ ವಿಶೇಷತೆ.

ನಾಲ್ಕನೇ ಅಧ್ಯಾಯದಲ್ಲಿ ಚೋಳ ರಾಜ್ಯ ಸ್ವರೂಪದ ಬಗ್ಗೆ ವಿವರಿಸುವ ಕರಾಶಿಮಾರವರು, ಚೋಳರ ವ್ಯಾಪಕ ಪ್ರಮಾಣದ ಶಾಸನಗಳನ್ನು ಬಹಳ ಸೂಕ್ಷ್ಮವಾಗಿ ಅಧ್ಯಯನಿಸಿ, ಚೋಳರಾಜ್ಯ ಒಂದು ಕೇಂದ್ರೀಕೃತ ರಾಜ್ಯ ವ್ಯವಸ್ಥೆಯನ್ನು ಹೊಂದಿತ್ತು ಎಂದು ತಿಳಿಸುತ್ತಾರೆ. ತಮ್ಮ ಈ ವಾದವನ್ನು ಸಮರ್ಪಕವಾಗಿ ಸಮರ್ಥಿಸಲು ಚೋಳರ ಆಡಳಿತ ವೈಖರಿಯನ್ನು ಕೂಲಂಕಶವಾಗಿ ವಿಶ್ಲೇಷಿಸುತ್ತಾರೆ. ಕೇಂದ್ರೀಕೃತ ವ್ಯವಸ್ಥೆಯ ಈ ಕೆಳಗಿನ ಕೆಲವೊಂದು ರಾಜಕೀಯ ಅಂಶಗಳನ್ನು ಗ್ರಹಿಸಿರುವುದರ ಆಧಾರದ ಮೇಲೆ ಈ ಅಭಿಪ್ರಾಯಕ್ಕೆ ಬಂದಿದ್ದಾರೆ.

1. ಅಂದಿನ ಚೋಳ ಉನ್ನತಾಧಿಕಾರಿಗಳು ಅರಸನ ಹೆಸರನ್ನು ತಮ್ಮ ಹುದ್ದೆಯೊಂದಿಗೆ ಸೇರ್ಪಡಿಸಿಕೊಂಡಿದ್ದದ್ದು. ಉದಾಹರಣೆಗೆ ರಾಜ ರಾಜ ಮುವೇಂದವೇಳನ್, ರಾಜೇಂದ್ರ ಚೋಳ ಬ್ರಹ್ಮರಾಯನ್, ಕುಲೋತ್ತುಂಗ ಚೋಳ ಪಲ್ಲವರಾಯನ್– ಇವರು ಕ್ರಮವಾಗಿ ಕಂದಾಯ, ನ್ಯಾಯಾಂಗ ಮತ್ತು ಆಸ್ಥಾನಿಕ ಅಧಿಕಾರಿಗಳಾಗಿದ್ದರು. ಅಷ್ಟೇ, ಅಲ್ಲದೆ, ಸೈನ್ಯದ ಸೇನಾಪತಿ, ದಂಡನಾಯಕರು ಮತ್ತು ಶ್ರೀಕಾರಿಯಮ್ ಎಂದು ಕರೆಯುತ್ತಿದ್ದ ದೇವಾಲಯ ಅಧಿಕಾರಿ – ಈ ಎಲ್ಲ ಅಧಿಕಾರಿಗಳೂ ಸಹ ಅರಸನ ಹೆಸರನ್ನು ತಮ್ಮ ಹುದ್ದೆಯೊಂದಿಗೆ ಸೂಚಿಸಿಕೊಳ್ಳುತ್ತಿದ್ದದ್ದು. ಇದು ಅಂದಿನ ಚೋಳ ಅರಸ ಇಡೀ, ರಾಜ್ಯದ ಅಧಿಕಾರಿಶಾಹಿ ವ್ಯವಸ್ಥೆಯ ಮೇಲೆ ಹಿಡಿತ ಹೊಂದಿದ್ದನ್ನು ಸೂಚಿಸುತ್ತದೆ.

2. ಶ್ರೀಲಂಕಾ ಮತ್ತು ಇತರ ಹೊರಗಣ ಪ್ರದೇಶಗಳು ಸೇರಿದಂತೆ ಒಂದನೇ ರಾಜರಾಜನ ಕಾಲದಲ್ಲಿ ಇಡೀ ಚೋಳ ರಾಜ್ಯ 9 ಮಂಡಲಗಳಿಂದ ವಿಭಜಿಸಲ್ಪಟ್ಟಿತ್ತು. ಪ್ರತಿಯೊಂದು ಮಂಡಲವು ನೂರಾರು ನಾಡುಗಳೆಂಬ ಸಣ್ಣ ಸಣ್ಣ ಆಡಳಿತ ವಿಭಾಗಗಳನ್ನು ಒಳಗೊಂಡಿದ್ದವು. ಈ ನಾಡುಗಳ ಕಂದಾಯ ವಸೂಲಿ ಸ್ಥಳೀಯ ಜಮೀನುದಾರನದ್ದಾಗಿತ್ತು. ಈ ಸ್ಥಳೀಯ ಮುಖ್ಯಸ್ಥರ ಪ್ರಾಬಲ್ಯವನ್ನು ನಿಯಂತ್ರಿಸುವ ಸಲುವಾಗಿ ಒಂದನೇ ರಾಜರಾಜನು ಮೊಟ್ಟ ಮೊದಲ ಬಾರಿಗೆ ಪ್ರತಿಯೊಂದು ಮಂಡಲವನ್ನು ಅನೇಕ ಒಳನಾಡುಗಳಾಗಿ ವಿಭಜಿಸಿ ಪ್ರತಿಯೊಂದು ಒಳನಾಡಿನ ವಿಭಾಗಕ್ಕೆ ಅನೇಕ ನಾಡುಗಳನ್ನು ಸೇರಿಸಿದನು. ಒಳನಾಡಿನ ಕಂದಾಯ ವಸೂಲಾತಿಗೆ ತನ್ನದೇ, ರಾಜ್ಯ ಅಧಿಕಾರಿಗಳನ್ನು ನೇಮಿಸಿದನು.

3. ಒಂದನೇ ರಾಜರಾಜನ ಆಳ್ವಿಕೆ ಕಾಲದ ಬಳಿಕ, ದೇವಾಲಯ, ಆಡಳಿತ ಕೇಂದ್ರಗಳೂ ಕೇಂದ್ರೀಕೃತ ರಾಜಕೀಯ ಸ್ವರೂಪವನ್ನು ಪಡೆದುಕೊಂಡದ್ದು– ಒಂದನೇ ರಾಜರಾಜ ತಂಜಾವೂರಿನಲ್ಲಿ ಬೃಹತ್ ಶಿವಾಲಯವನ್ನು ನಿರ್ಮಿಸಿ, ರಾಜರಾಜೇಶ್ವರ ದೇವಾಲಯವೆಂದು ಅನ್ವರ್ಥಗಳಿಸಿರುವುದು; ಒಂದನೇ ರಾಜೇಂದ್ರನು ಉತ್ತರ ಭಾರತವನ್ನು ಜಯಿಸಿದ್ದರ ಕುರುಹಾಗಿ ಅಲ್ಲಿನ ಗಂಗಾಜಲವನ್ನು ತಂದು, ಇಲ್ಲಿ 'ಗಂಗೈಕೊಂಡ ಚೋಳಪುರ'ವೆಂದು ನಿರ್ಮಿಸಿದನಲ್ಲದೆ, ಮತ್ತೊಂದು ಬೃಹದೀಶ್ವರ ದೇವಾಲಯವನ್ನು ನಿರ್ಮಿಸಿ ಅದನ್ನು 'ರಾಜೇಂದ್ರ ಚೋಳೇಶ್ವರ' ದೇವಾಲಯವೆಂದು ಕರೆದನು.

4. ಅಷ್ಟೇ ಅಲ್ಲದೆ, ಚೋಳ ಅರಸರು ನಡೆಸಿದ ಸಾಗರೋತ್ತರ ಆಕ್ರಮಣಗಳು ಮತ್ತು ಅಲ್ಲಿನ ಅಧಿಪತ್ಯ– ಇವೆಲ್ಲವು ಚೋಳ ಅರಸನು ಇಡೀ ರಾಜ್ಯದ ಅಧಿಪತ್ಯದ ಮೇಲೆ ಏಕಸ್ವಾಮ್ಯವನ್ನು ಸಾಧಿಸಿದ್ದನ್ನೇ ಸಾರುತ್ತಿವೆ ಎಂದು ನೊಬೊರು ಕರಾಶಿಮಾ ಅಭಿಪ್ರಾಯ ಪಟ್ಟಿದ್ದಾರೆ.

ಈ ಚೋಳ ಆಳ್ವಿಕೆ ಅವಧಿಯಲ್ಲಿ ಭೂ ಒಡೆತನ ಮತ್ತು ಸಮಾಜದಲ್ಲಿ ಕಂಡು ಬಂದ ಕೆಲವು ಬದಲಾವಣೆಗಳನ್ನು ಗುರುತಿಸುತ್ತಾ, ಹಿಂದೆ ಕೇವಲ ಬ್ರಾಹ್ಮಣ ಮತ್ತು ವೆಳ್ಳಾಳರ ಕೈಯಲ್ಲಿ ಕೇಂದ್ರಿಕೃತವಾಗಿದ್ದ ಕೃಷಿ ಭೂಮಿಯ ಮೇಲೆ ಈ ಅವಧಿಯಲ್ಲಿ ಸಮಾಜದ ಇತರ ಅಬ್ರಾಹ್ಮಣ ಸಮುದಾಯಗಳಾದ ಕೈಕೊಳ್ಳರು, ಚೆಟ್ಟಿಯರು ಭೂ ಒಡೆತನ ಸಾಧಿಸಿಕೊಂಡದ್ದು; ಕುಶಲಕರ್ಮಿ ಮತ್ತು ವರ್ತಕರಾದ ಚೆಟ್ಟಿಗಳು, ಶಂಕರಪಾಡಿಯರು (ಗಾಣಿಗರು), ಸಾಲಿಯರು ಮತ್ತು ಕೈಕೊಳ್ಳರು (ನೇಕಾರ ಸಮುದಾಯಗಳು) ಮತ್ತು ತಟ್ಟರು ಎಂದು ಕರೆಯುತ್ತಿದ್ದ, ಅಕ್ಕಸಾಲಿಗರಿಂದ ತುಂಬಿದ್ದ ಹೆಚ್ಚು ಹೆಚ್ಚು ನಗರಗಳು ಈ ಕಾಲಾವಧಿಯಲ್ಲಿ ಏಳಿಗೆಗೆ ಬಂದದ್ದು; ಹಾಗೆಯೇ, ಮಣಿಗ್ರಾಮಮ್, ಐಯ್ಯಾವೊಳೆ ಐನೂರ್ವರ್ ಮತ್ತು ವಿದೇಶಿ ಅಂಜುವಣ್ಣಮ್‌ಗಳಂತಹ ವರ್ತಕ ಸಂಘಗಳು ಈ ಕಾಲಾವಧಿಯಲ್ಲಿ ಸಕ್ರಿಯವಾದದ್ದನ್ನು ಈ ಅಧ್ಯಾಯದಲ್ಲಿ ಚರ್ಚಿಸುತ್ತಾರೆ.

13 ಮತ್ತು 14ನೇ ಶತಮಾನದ ವಿದ್ಯಮಾನಗಳನ್ನು ವಿವರಿಸುವ, ಐದನೇ ಅಧ್ಯಾಯದಲ್ಲಿ ಕರಾಶಿಮಾರವರು ಸಮಾಜ ರಚನೆಯಲ್ಲಿ ಕಂಡು ಬಂದ ಮಹತ್ತರ ಬದಲಾವಣೆಗಳನ್ನು ಗುರುತಿಸುತ್ತಾರೆ. ಅವುಗಳಲ್ಲಿ, ಈ ಅವಧಿಯಲ್ಲಿ ಕಂಡುಬಂದ ವೃತ್ತಿ ಆಧಾರಿತ ಸಾಮಾಜಿಕ ಸಮುದಾಯಗಳ ಏಳಿಗೆ ಪ್ರಮುಖವಾದುದು. ಉದಾಹರಣೆಗೆ– ಕೃಷಿಕ ವರ್ಗದ ಚಿತ್ತಿರಮೇಳಿ ಪೆರಿಯನಾಟ್ಟು, 79–ನಾಡು, ಪೆರಿಯ ವಿಷಯಂ, 18–ವಿಷಯಂ, ಐನೂರ್ವರ್ (ವರ್ತಕ ಸಮುದಾಯ), ವಳಂಗೈ/ಇಡಂಗೈ ಇತ್ಯಾದಿ. ಈ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಅಗತ್ಯತೆಗಳಿಗಾಗಿ ಈ ಎಲ್ಲಾ ಪಂಗಡ ಹಾಗೂ ಒಕ್ಕೂಟ ಸಮುದಾಯಗಳು ರಚನೆಗೊಂಡವು. ಈ ಕಾಲಾವಧಿಯ ಶಾಸನಗಳಲ್ಲಿ ಬ್ರಾಹ್ಮಣ ಪ್ರಧಾನ ಶಾಪಾಶಯಗಳ ಬದಲಿಗೆ ಅವಕ್ಕೆ ವಿರುದ್ಧವಾದ ಸಮಾಜದ ಅಂದಿನ ಇತರ ಪ್ರಬಲ ತಳ ಸಮುದಾಯ ಪ್ರಧಾನ ಶಾಪಾಶಯಗಳು ಉಲ್ಲೇಖಗೊಳ್ಳತೊಡಗಿದವು. ಈ ಕಾಲಾವಧಿಯಲ್ಲಿ ಧಾರ್ಮಿಕ ವ್ಯವಸ್ಥೆಯಲ್ಲಿ ಕಂಡುಬಂದ ಮಹತ್ತರ ಬೆಳವಣಿಗೆಗಳಲ್ಲಿ ಮಠಗಳ ಉದಯ ಮತ್ತು ಅವುಗಳ ವ್ಯಾಪಕ ಪ್ರಸರಣ ಪ್ರಮುಖವಾದುದು. ಅರಸರು, ಪ್ರಾಂತೀಯ ಮುಖಂಡರು, ಅಧಿಕಾರಿಗಳು ಹಾಗೂ ವೆಳ್ಳಾಳರುಗಳನ್ನು ಒಳಗೊಂಡಂತೆ ಬಹುಸಂಖ್ಯಾತ ಅಬ್ರಾಹ್ಮಣ ಸಮುದಾಯಗಳು ಅದರಲ್ಲೂ ಕರಕುಶಲ ಪಂಗಡದವರು, ಗಿರಿಜನರು ಮತ್ತು ವರ್ತಕ ಸಮುದಾಯಗಳು ಹೇರಳವಾಗಿ ಈ ಮಠಗಳಿಗೆ ಪ್ರೋತ್ಸಾಹ ನೀಡಿದರು. ಅಷ್ಟೇ ಅಲ್ಲದೆ, ಪ್ರತಿಯೊಂದು ಸಮುದ್ಾಯದವರೂ ತಮ್ಮದೇ, ಮಠಗಳನ್ನು ಸ್ಥಾಪಿಸಿಕೊಂಡದ್ದು ಇದೇ ಅವಧಿಯಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಚಿತ್ತಿರಮೇಳಿ ಪೆರಿಯನಾಟ್ಟರ್ ಸಮುದಾಯದವರು ಚಿತ್ತಿರಮೇಳಿ ಮಠ ಸ್ಥಾಪಿಸಿಕೊಂಡರು. ಹೀಗೆ ಇವೇ ಮೊದಲಾದ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಾರೆ.

ಇನ್ನು ಆರನೇ ಅಧ್ಯಾಯದಲ್ಲಿ ವಿಜಯನಗರ ಸಾಮ್ರಾಜ್ಯ, ದಖನಿ ಸುಲ್ತಾನರು, ನಾಯಕ ಮನೆತನಗಳ ಏಳಿಗೆ, ವಿಜಯನಗರ ಮತ್ತು ನಾಯಕ ಸಂಸ್ಥಾನಗಳ ನಡುವೆ ಹೊಂದಿದ್ದ ರಾಜಕೀಯ ಸಂಬಂಧ; ಅಂದಿನ ವ್ಯಾಪಾರ–ವಹಿವಾಟು; ಉದ್ದಿಮೆಗಳ ಬೆಳವಣಿಗೆ ಮತ್ತು ಆ ಕಾಲದ ಧಾರ್ಮಿಕ ನೀತಿ ಕುರಿತಾಗಿ ವಿಶ್ಲೇಷಿಸುತ್ತಾರೆ.

ಆರಂಭಿಕ ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿನ ಹುಳುಕುಗಳನ್ನು ಕಂಡುಹಿಡಿದ ನೊಬೊರು ಕರಾಶಿಮಾರವರು, ಹೇಗೆ ಕ್ರಿ.ಶ.1429ರಲ್ಲಿ ತಮಿಳಿನ ಇಡಂಗೈ/ವಳಂಗೈ ಪಂಗಡದವರು ರಾಜ್ಯದ ದುರಾಡಳಿತ ಮತ್ತು ಜಮೀನುದಾರರ ಶೋಷಣೆಯ ವಿರುದ್ಧ ದಂಗೆ ಎದ್ದಿದ್ದರು ಎಂಬುದನ್ನು ವಿವರಿಸುತ್ತಾರೆ. ಈ ದಂಗೆಯು ಅದುತುರೈ, ಎಲವನಸುರ್, ಕೊರಕ್ಕೈ, ತಿರುವೈಗವೂರುಗಳನ್ನೊಳಗೊಂಡಂತೆ ಇಡೀ ವೆಲ್ಲಾರ್ ಮತ್ತು ಕಾವೇರಿ/ ಕೊಲ್ಲಿದಮ್ ಕಣಿವೆಗಳಲ್ಲಿ ಪ್ರಸರಿಸಿದ್ದ ಪ್ರದೇಶಗಳನ್ನು ತಮ್ಮದೇ ಯೋಜಿತ ನಕ್ಷೆಯಲ್ಲಿ ಗುರುತಿಸಿ, ಸಮರ್ಪಕವಾಗಿ ವಿಶ್ಲೇಷಿಸಿದ್ದಾರೆ.

ದೇವಾಲಯ ಅಂದು ಆರ್ಥಿಕ ವ್ಯವಸ್ಥೆಯಲ್ಲಿ ವಹಿಸಿದ ಪಾತ್ರವನ್ನು ತಿಳಿಸಿಕೊಡುವುದರ ಜೊತೆಗೆ ಈ ಕಾಲಾವಧಿಯಲ್ಲಿ ವ್ಯಾಪಾರ–ವಹಿವಾಟು ಮತ್ತು ನೇಕಾರಿಕೆಯಂತಹ ವಿವಿಧ ಉದ್ದಿಮೆಗಳ ಬೆಳವಣಿಗೆಯನ್ನು ಮತ್ತು ಆ ಉದ್ದಿಮೆಗಳು ಇಡೀ ದಕ್ಷಿಣ ಭಾರತದಲ್ಲಿ ಹರಡಿಕೊಂಡಿದ್ದ ವ್ಯಾಪ್ತಿಯನ್ನು ನಕ್ಷೆಯ ಸಹಾಯದಿಂದ ವಿಶ್ಲೇಷಿಸಿದ್ದಾರೆ.

ಕರಾಶಿಮಾ ರವರು ಕ್ರಿ.ಶ.16ನೇ ಶತಮಾನದ ಅರಸ ಹೇಗೆ ಒಬ್ಬ ದಿವ್ಯ ಪ್ರಭುವಾಗಿದ್ದನೆಂಬುದನ್ನು ಹರ್ಮನ್ ಕುಲ್ಕ ಮತ್ತು ಫಿಲಿಪ್. ಬಿ. ವ್ಯಾಗನರ್‌ರವರ ವಾದಗಳನ್ನು ಸಮರ್ಥಿಸುತ್ತಾ, ವಿಜಯನಗರ ಸಾಮ್ರಾಟರಿಂದ ಅದ್ದೂರಿಯಾಗಿ ಆಚರಿಸಲ್ಪಡುತ್ತಿದ್ದ ರಾಜಹಬ್ಬ ಮಹಾನವಮಿ ಹೇಗೆ ಅದೊಂದು ಸೈನಿಕ, ಆಡಳಿತಾತ್ಮಕ ಮತ್ತು ಆಚರಣಾತ್ಮಕ ಉದ್ದೇಶಗಳನ್ನೊಳಗೊಂಡಿತ್ತು ಎಂಬ ಸೂಕ್ಷ್ಮಗಳನ್ನು ಹೊರಗೆಡವುತ್ತಾರೆ.

ಅಂತಿಮವಾಗಿ ನೊಬೊರು ಕರಾಶಿಮಾರವರು ಈ ಅಧ್ಯಾಯದಲ್ಲಿ ದಕ್ಷಿಣ ಭಾರತದ ನಾಲ್ಕು ಪ್ರಮುಖ ನಾಯಕ ರಾಜಮನೆತನಗಳಾದ ಮಧುರೈ, ತಂಜಾವೂರು, ಸೆಂಜಿ(ಜಿಂಜಿ) ಮತ್ತು ಇಕ್ಕೇರಿ ಸಂಸ್ಥಾನಗಳ ರಾಜಕೀಯ ಸ್ವರೂಪವನ್ನು ಚರ್ಚಿಸುತ್ತಾ, ಈ ಎಲ್ಲ ಸ್ಥಳೀಯ ನಾಯಕ ಸಂಸ್ಥಾನಗಳು ಯುದ್ಧ ನಿಪುಣ ಶೂದ್ರ ಸಮುದಾಯಗಳಿಂದ ಬಂದಂತಹವರಾಗಿದ್ದು, ತಮ್ಮ ರಾಜಮನೆತನದ ಉಗಮವನ್ನು ದೈವಿಕ ಪರಿಕಲ್ಪನೆಯೊಂದಿಗೆ ಸಮ್ಮಿಳಿತಗೊಳಿಸಿಕೊಳ್ಳುವ, ಇಲ್ಲವೆ ಪ್ರಬಲ ರಾಜಸಂಸ್ಥಾನದ ಅನುಯಾಯಿಗಳಾಗಿ ಅಧಿಕಾರಕ್ಕೆ ಬಂದಂತಹ–ತಮ್ಮದೇ, ರಾಜನೀತಿಯನ್ನು ಪ್ರತಿಷ್ಠಾಪಿಸಿಕೊಂಡದ್ದನ್ನು ಮತ್ತು ತಮ್ಮ ರಾಜ್ಯವನ್ನು ಸಮರ್ಥವಾಗಿ ನಿಭಾಯಿಸಲು ರಾಜ್ಯ ಅರ್ಥವ್ಯವಸ್ಥೆಯಲ್ಲಿ ತಾವು ವಹಿಸಿದ ಪಾತ್ರ– ಈ ಅಂಶವನ್ನು ಬಹಳ ಪರಿಣಾಮಕಾರಿಯಾಗಿ ವಿಶ್ಲೇಷಿಸಿದ್ದಾರೆ. ಈ ಮೂಲಕ ಇದಕ್ಕೆ ಪೂರಕವಾದ ವಿ.ನಾರಾಯಣರಾವ್, ಡೇವಿಡ್ ಶುಲ್ಮನ್ ಹಾಗೂ ಸಂಜಯ್ ಸುಬ್ರಹ್ಮಣ್ಯಂ ಅವರುಗಳ ವಾದವನ್ನು ಪುಷ್ಟೀಕರಿಸಿದ್ದಾರೆ(ಪು.228–29). ಆದರೂ, ಕ್ರಿ.ಶ.17ನೇ ಶತಮಾನದ ಈ ನಾಯಕ ರಾಜ್ಯ ಏಳಿಗೆಯ ಸಂದರ್ಭದಲ್ಲಿ ಕ್ರಾಂತಿಕಾರಕ ಆರ್ಥಿಕ ಬೆಳವಣಿಗೆಗಳು ಕಂಡುಬರುತ್ತಿದ್ದು. ಈ ಹಿನ್ನೆಲೆಯಲ್ಲಿ ನಾಯಕ ಸಂಸ್ಥಾನಗಳ ಸ್ಥಾಪನೆ

ಮತ್ತು ಅವುಗಳ ಏಳಿಗೆ ಕುರಿತಾಗಿ ವಿಸ್ತೃತವಾಗಿ ಅಧ್ಯಯನಿಸಲು ವಿಪುಲ ಅವಕಾಶಗಳಿವೆ ಎಂದು ಅಭಿಪ್ರಾಯ ಪಡುತ್ತಾರೆ.

ಇಬ್ಬರು ಪ್ರಸಿದ್ಧ ಮಹಿಳಾ ವಿದ್ವನ್ಮಣಿಗಳಾದ ಆರ್.ಮಹಾಲಕ್ಷ್ಮಿ ಮತ್ತು ಪಾರ್ವತಿ ಮೆನನ್ ರವರು ಪ್ರಸಕ್ತ ಆವೃತ್ತಿಗೆ ತಮ್ಮ ಅಧ್ಯಯನ ಕೊಡುಗೆ ನೀಡಿರುವುದು ಈ ಆವೃತ್ತಿಯ ಮತ್ತೊಂದು ವಿಶೇಷ. ಈ ಇಬ್ಬರೂ ವಿದ್ವಾಂಸರೂ ಬಹುತೇಕ ಮಹಿಳಾ ವಿಚಾರಗಳ ಮೇಲೆ ಅಧ್ಯಯನ ನಡೆಸಿದ್ದಾರೆ. ಆರ್.ಮಹಾಲಕ್ಷ್ಮಿರವರ 'Women in Pre-modern South Indian Society', ಅಧ್ಯಯನದಲ್ಲಿ ಕ್ರಿ.ಶ.6–9ನೇ ಶತಮಾನದ ನಡುವಿನ ಸ್ತ್ರೀ ಸ್ಥಾನಮಾನಗಳ ಬಗ್ಗೆ ಚರ್ಚಿಸುತ್ತಾ, ಪಿತೃಪ್ರಧಾನ ಕುಟುಂಬ ಮತ್ತು ಪುರುಷ ಪ್ರಧಾನ ಸಮಾಜ ಹೊಂದಿದ್ದರೂ ಸಹ ಮಾತೃ ಕೇಂದ್ರಿತ ಸಮಾಜ ವ್ಯವಸ್ಥೆ, ಸಾಮಾಜಿಕ ಸಂಘಟನೆ ಹೊಂದಿದ್ದು, ಮಾತೃ ಆರಾಧನಾ ವ್ಯವಸ್ಥೆ ಹೆಚ್ಚು ಪ್ರಸಿದ್ಧಿ ಪಡೆದಿದ್ದನ್ನು ಸಾಹಿತ್ಯ, ಶಾಸನ ಮತ್ತು ಮೂರ್ತಿಶಿಲ್ಪಗಳಂತಹ ಪ್ರಧಾನ ಆಧಾರಗಳ ಸಹಾಯದಿಂದ ವಿಶ್ಲೇಷಿಸುತ್ತಾರೆ. ಮಹಾಲಕ್ಷ್ಮಿಯವರು ಶಾಸನೀಯ ಆಧಾರಗಳ ಸಹಾಯದಿಂದ ತಿಳಿಸುವಂತೆ, ಅಂದಿನ ರಾಜವರ್ಗ, ಅಧಿಕಾರಶಾಹಿವರ್ಗ, ಪ್ರಾಂತೀಯ ಮುಖ್ಯಸ್ಥ ಕುಟುಂಬದವರು, ಪ್ರಭಾವಿ ಬ್ರಾಹ್ಮಣ ಮನೆತನದ ಮತ್ತು ದೇವಾಲಯ ಕೇಂದ್ರಿತ ದೇವದಾಸಿಯರು ಅಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ತಮ್ಮದೇ ಅಧಿಪತ್ಯವನ್ನು ಸಾಧಿಸಿದ್ದರು ಎಂದೂ, ದೇವದಾಸಿ ವ್ಯವಸ್ಥೆ ಒಂದು ಪ್ರತಿಷ್ಠಿತ ಪ್ರಭಾವಿ ವ್ಯವಸ್ಥೆಯಾಗಿತ್ತೆಂದೂ ತಿಳಿಸುತ್ತಾರೆ.

ಸಾಮಾನ್ಯವರ್ಗದ ಮಹಿಳೆಯು ಸಹ, ಕೃಷಿಕಳಾಗಿ, ವರ್ತಕಳಾಗಿ ಹಾಗೂ ಇತರ ಕರ–ಕುಶಲ ಉದ್ದಿಮೆಯಲ್ಲಿ ಕೆಲಸಗಾರ್ತಿಯಾಗಿಯೂ ದುಡಿಯುತ್ತಿದ್ದಳು ಎಂಬುದನ್ನು ವಿಷದೀಕರಿಸಿದ್ದಾರೆ. ಹೀಗೆ ಮಾತೃ ಕೇಂದ್ರಿತ ಸಮಾಜ ವ್ಯವಸ್ಥೆ, ಮಾತೃ ಆರಾಧನಾ ಧಾರ್ಮಿಕ ಪದ್ಧತಿ, ಪ್ರಭಾವಿವರ್ಗದ ಮಹಿಳೆ ಅಂದಿನ ಮುಖ್ಯವಾಹಿನಿಯಲ್ಲಿ ಪಾಲ್ಗೊಳ್ಳುತ್ತಿದ್ದ ಬಗೆ ಮತ್ತು ಸಾಮಾನ್ಯವರ್ಗದ ಮಹಿಳೆ ತನ್ನ ದೈನಂದಿನ ಕಾರ್ಯ–ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಿದ್ದ ಬಗೆ, ಹೀಗೆ ಅಂದಿನ ಸ್ತ್ರೀಯರ ಸ್ಥಾನಮಾನವನ್ನು ನಾಲ್ಕು ಪದರುಗಳಲ್ಲಿ ವಿಶ್ಲೇಷಿಸಿದ್ದಾರೆ.

ಮಹಾಲಕ್ಷ್ಮಿಯವರು ವಿಶ್ಲೇಷಿಸ ತೊಡಗುವ ಮತ್ತೊಂದು ಪ್ರಮುಖ ವಿಷಯವೆಂದರೆ, ದಕ್ಷಿಣ ಭಾರತದ ಕ್ರಿ.ಶ.10–12ನೇ ಶತಮಾನದ ಅವಧಿಯಲ್ಲಿ ದೇವಾಲಯ ಮತ್ತು ಮೂರ್ತಿಶಿಲ್ಪಗಳ ನಿರ್ಮಾಣ ಕುರಿತಾಗಿ. ಇಲ್ಲಿ ಇವರು ಗುರುತಿಸುವ ಪ್ರಮುಖ ಅಂಶಗಳೆಂದರೆ– ದೇವಾಲಯ ನಿರ್ಮಾಣ ಬೆಳವಣಿಗೆಯು ವಿವಿಧ ಹಂತಗಳನ್ನು ಕಂಡಿದ್ದು, ಆರಂಭಿಕ ಮಧ್ಯಕಾಲಾವಧಿಯ ದಕ್ಷಿಣ ಭಾರತದಲ್ಲಿ ಅತ್ಯಂತ ಪ್ರಬಲ ರಾಜಮನೆತನವಾಗಿ ಹೊರಬಂದ ಚೋಳರ ಆಳ್ವಿಕೆಯಲ್ಲಿ ದೇವಾಲಯ ನಿರ್ಮಾಣದಲ್ಲಿನ ಸ್ಥಿತ್ಯಂತರ ಕಂಡುಬಂದಿತು. ಸರಳ ಏಕಕೂಟ ದೇವಾಲಯಗಳು ಆರಂಭಿಕ ಅವಧಿಯಲ್ಲಿ ನಿರ್ಮಾಣಗೊಂಡು ನಂತರ ಅವು ಅರಸನೊಬ್ಬನ ಜ್ಞಾಪಕಾರ್ಥವಾಗಿ ನಿರ್ಮಿಸುವಂತಹ ಸ್ಮಾರಕ ದೇವಾಲಯ ಪರಿಕಲ್ಪನೆ (ಉದಾಹರಣೆಗೆ ಕಾಳಹಸ್ತಿ ಬಳಿಯ ತೊಂಡೈಮನಾಡಿನಲ್ಲಿ ಒಂದನೇ ಆದಿತ್ಯನ ನೆನಪಿನಾರ್ಥ ನಿರ್ಮಿಸಿದ ಕೋದಂಡೇಶ್ವರ ದೇವಾಲಯ) ಯಿಂದ ಮುಂದೆ ರಾಜಕೀಯ ಅಧಿಪತ್ಯವನ್ನು ಮೆರೆಸುವಂತಹ, ದಿವ್ಯ ಪ್ರಭುವನ್ನಾಗಿ

ಪ್ರತಿಬಿಂಬಿಸುವಂತಹ ಪರಿಕಲ್ಪನೆಗೆ (ಉದಾಹರಣೆಗೆ ಒಂದನೇ ರಾಜರಾಜನಿಂದ ತಂಜಾವೂರಿನಲ್ಲಿ ನಿರ್ಮಾಣಗೊಂಡ ರಾಜರಾಜೇಶ್ವರ ದೇವಾಲಯ; ಒಂದನೇ ರಾಜೇಂದ್ರನಿಂದ ಗಂಗೈಕೊಂಡಚೋಳಪುರಂ ನಲ್ಲಿ ನಿರ್ಮಿಸಿದ ರಾಜೇಂದ್ರ ಚೋಳೀಶ್ವರ ದೇವಾಲಯ; ದರಸುರಾಮ್ ನಲ್ಲಿ ಎರಡನೇ ರಾಜರಾಜನಿಂದ ನಿರ್ಮಾಣಗೊಂಡ ಐರಾವತೇಶ್ವರ/ರಾಜರಾಜೇಶ್ವರಂ/ದರಸುರಾಮ್ ದೇವಾಲಯ) ದೇವಾಲಯ ನಿರ್ಮಾಣದಲ್ಲಿ ಸ್ಥಿತ್ಯಂತರಗಳು ಕಂಡುಬಂದಿವೆ ಎಂದು ವಿಶ್ಲೇಷಿಸುತ್ತಾರೆ.

ಚೋಳ ದೇವಾಲಯಗಳ ಸ್ವರೂಪಗಳ ಜೊತೆಗೆ ಮಹಾಲಕ್ಷ್ಮಿಯವರು ಚೋಳರಾಜ್ಯದ ಉತ್ತರದ ಕಾಕತೀಯ, ಗಂಗ, ಕಲ್ಯಾಣ ಚಾಳುಕ್ಯ ಮತ್ತು ವೆಂಗಿ ಚಾಳುಕ್ಯರು ಹೇಗೆ ಗೋದಾವರಿ ಮತ್ತು ಕೃಷ್ಣಾ ನದಿಪಾತ್ರಗಳಲ್ಲಿ ಬೃಹತ್ ದೇವಾಲಯಗಳನ್ನು ನಿರ್ಮಿಸಿದರು ಎಂಬುದರ ಕುರಿತಾಗಿ ಹಾಗೂ ಮತ್ತಷ್ಟು ದಕ್ಷಿಣಕ್ಕೆ ಕೇರಳ ಪ್ರಾಂತ್ಯದಲ್ಲೂ ಈ ಅವಧಿಯಲ್ಲಿ ನಿರ್ಮಾಣಗೊಂಡ ದೇವಾಲಯಗಳ ಕುರಿತಾಗಿ ಸಂಕ್ಷಿಪ್ತವಾಗಿ ಉಲ್ಲೇಖಿಸುತ್ತಾರೆ.

ಮತ್ತೋರ್ವ ವಿದ್ವಾಂಸರಾದ ಪಾರ್ವತಿ ಮೆನನ್‌ರವರು ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ದಕ್ಷಿಣ ಭಾರತದಲ್ಲಿ ಜರುಗಿದ ಮಹಿಳಾ ಆಂದೋಲನಗಳ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರ ವಸಾಹಾತುಶಾಹಿ ನೀತಿಗಳಿಂದಾಗಿ ಜರ್ಜರಿತವಾದ ಆರ್ಥಿಕ ವ್ಯವಸ್ಥೆ ಒಂದು ಕಡೆ, ಈ ನೆಲದಲ್ಲಿ ಈಗಾಗಲೇ ಧಾರ್ಮಿಕ ಮನ್ನಣೆಯನ್ನು ಪಡೆದು ಸಾಮಾಜಿಕವಾಗಿ ಆಚರಣೆಯಲ್ಲಿದ್ದ ಬಾಲ್ಯ ವಿವಾಹ, ಸತಿ ಪದ್ಧತಿ, ಭ್ರೂಣಹತ್ಯೆ, ಬಹುಪತ್ನಿತ್ವ, ಹೆಣ್ಣು ಶಿಶು ಮಾರಾಟದಂತಹ ಸಂಪೂರ್ಣವಾಗಿ ಮಹಿಳೆಯರ ಹಕ್ಕುಗಳನ್ನು ಹತ್ತಿಕ್ಕುವಂತಹ, ಆಕೆಯನ್ನು ಕಣ್ಣೀರ ಕೂಪಕ್ಕೆ ತಳ್ಳುವಂತಹ ಪರಿಸ್ಥಿತಿ ಮತ್ತೊಂದು ಕಡೆ. ಈ ಎಲ್ಲ ಅನಿಷ್ಠ ಪದ್ಧತಿ ಆಚರಣೆಗಳಿಂದ ಕ್ರಿ.ಶ.18–19ನೇ ಶತಮಾನ ಅಂದಕಾರದಿಂದ ಕೂಡಿತ್ತು ಎಂದು ತಿಳಿಸುತ್ತಾ, ಮಹಿಳಾ ಸಮಸ್ಯೆ, ಅವರ ಸ್ಥಿತಿ–ಗತಿ ಹಾಗೂ ಈ ಎಲ್ಲ ಅನಿಷ್ಠ ಪದ್ಧತಿಗಳ ವಿರುದ್ಧ ರಾಜಾರಾಮ್ ಮೋಹನ್ ರಾಯ್, ಈಶ್ವರ ಚಂದ್ರ ವಿದ್ಯಾಸಾಗರ್, ದಯಾನಂದ ಸರಸ್ವತಿ, ಮಹದೇವ ಗೋವಿಂದ ರಾನಡೆ ಮತ್ತು ಆರ್. ವೆಂಕಟರತ್ನಂ ನಾಯ್ಡು ಹಾಗೂ ದಕ್ಷಿಣ ಭಾರತದಲ್ಲಿ ವೀರೇಶಲಿಂಗಂ ಪಂತುಲು, ಪಂಡಿತ ರಮಾಭಾಯ್, ಸರಳಾದೇವಿ ಚೌಧುರಾಣಿ, ಸ್ವರ್ಣಕುಮಾರಿ ದೇವಿ, ಅನ್ನಿ ಜಗನ್ನಾಥನ್, ರುಕ್ಮಭಾಯಿ, ಸಿಸ್ಟರ್ ಸುಬ್ಬುಲಕ್ಷ್ಮಿ, ರುಕ್ಮಿಣಿ ಲಕ್ಷ್ಮೀಪತಿ, ಕಮಲಾದೇವಿ ಚಟ್ಟೋಪಾಧ್ಯಾಯ್, ಹಾಗೂ ಮುತ್ತು ಲಕ್ಷ್ಮಿರೆಡ್ಡಿ– ಹೀಗೆ ಹಲವಾರು ಮಂದಿ ಸುಧಾರಣಾಕಾರರು ಮಹಿಳೋದ್ಧಾರ ಪರವಾಗಿ ಎತ್ತಿದ ದನಿ ಹಾಗೂ ಈ ಎಲ್ಲ ಮಹನೀಯರ ಶ್ರಮದ ಫಲವಾಗಿ ಕಂಡುಬಂದ ಕಾನೂನಾತ್ಮಕ ಸುಧಾರಣೆ–ಕುರಿತಾಗಿ ಮೆನನ್ ವಿಶ್ಲೇಷಿಸುತ್ತಾರೆ.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಈ ಅವಧಿಗೆ ತಕ್ಕಂತಹ ಮಹಿಳಾ ಸುಧಾರಣಾ ಅಗತ್ಯಗಳು ಹಾಗೂ ಆ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ಜರೂರಿ ಕ್ರಮಗಳ ಕುರಿತಾಗಿ ವಿವರಿಸುತ್ತಾರೆ. ಸ್ವಾತಂತ್ರ್ಯ ಭಾರತದಲ್ಲಿ ಮಹಿಳೆಯೂ ಸಹ ಪುರುಷನಷ್ಟೆ ಸಮಾನವಾದ ಆರ್ಥಿಕ, ಕೌಟುಂಬಿಕ ಮತ್ತು ಸಾಮಾಜಿಕ ಮೌಲ್ಯವುಳ್ಳವಳಾಗಿದ್ದಾಳೆ. ಭಾರತ ಸರ್ಕಾರ ಆಕೆಯ ಪ್ರಾತಿನಿಧಿಕ ರಾಜಕಾರಣದಿಂದ ಹಿಡಿದು ಆರ್ಥಿಕ ಮತ್ತು ಸಾಮಾಜಿಕ ವಲಯದಲ್ಲಿ

ಆಗಬೇಕಾದ ಉನ್ನತಿಯ ಕಡೆಗೆ ಗಮನ ಹರಿಸಿದ್ದು, ಸ್ವಾತಂತ್ರ್ಯದ ಕೆಲವು ದಶಕಗಳ ತರುವಾಯ. ಅದೂ 1975 ರಲ್ಲಿ ವಿಶ್ವಸಂಸ್ಥೆಯು ಆ ವರ್ಷವನ್ನು ಅಂತರರಾಷ್ಟ್ರೀಯ ಮಹಿಳಾ ದಿನವೆಂದು ಘೋಷಿಸಿದ ಬಳಿಕ. ಇದಕ್ಕೆ ಪೂರಕವಾಗಿ ಭಾರತ ಸರ್ಕಾರ ಮಹಿಳಾ ಸ್ಥಿತಿ-ಗತಿ ಆಕೆಯ ಪ್ರಗತಿಯ ಕುರಿತಾದ ವರದಿಯನ್ನು ತಯಾರಿಸಿತು.

1980 ರ ದಶಕದಲ್ಲಿ ತಮಿಳುನಾಡು, ಆಂಧ್ರ, ಕೇರಳಾಗಳಲ್ಲಿ ಮಹಿಳೆಯ ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯದ ಪರವಾಗಿ ಅನೇಕ ಆಂದೋಲನಗಳು ನಡೆಸಿದರ ಫಲವಾಗಿ ಸತಿ ತಡೆ ಕಾಯ್ದೆ 1987, ಇಸ್ಲಾಮ್ ಮಹಿಳಾ ಕಾಯ್ದೆ 1986- ಗಳಂತಹ ಮಹಿಳಾ ಸಮಸ್ಯೆಗಳಿಗೆ ಸ್ಪಂದಿಸುವಂತಹ ಕಾಯ್ದೆಗಳು ಅನುಷ್ಠಾನಗೊಂಡಿದ್ದನ್ನು; ಮತ್ತು ಕಳೆದ ಮೂರು ದಶಕಗಳಲ್ಲಿ ವಿವಿದೆಡೆಗಳಲ್ಲಿ ನಡೆದ ಕೋಮುಗಲಭೆಗಳಿಂದ ಜರ್ಜರಿತವಾದ ಮಹಿಳಾ ಸ್ಥಿತಿಯನ್ನು 1984 ರ ಸಿಖ್ ಗಲಭೆ, 1992 ರ ಬಾಬ್ರಿ ಮಸೀದಿ ಧ್ವಂಸ ಪ್ರಕರಣದ ಬಳಿಕ ಸಂಭವಿಸಿದ ಗಲಭೆಗಳು ಮತ್ತು 2002 ರ ಗುಜರಾತ್ ಗಲಭೆಗಳು ಅಲ್ಪಸಂಖ್ಯಾತ ಮಹಿಳಾವರ್ಗವನ್ನು ಇನ್ನಿಲ್ಲದಂತೆ ಘಾಸಿಗೊಳಿಸಿದ್ದರ ಕಡೆ ಲೇಖಕರು ಹೆಚ್ಚಿನ ಗಮನ ಹರಿಸಿ ವಿಶ್ಲೇಷಿಸಿರುವುದು ರಾಷ್ಟ್ರೀಯ ಪ್ರಗತಿಯ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣ ಸಮಕಾಲೀನ ಅಧ್ಯಯನವಾಗಿದೆ. ಇದೇ ಲೇಖನದಲ್ಲಿ ಲೇಖಕರು ಬೆಳಕು ಚೆಲ್ಲಿರುವ ಮತ್ತೊಂದು ಅಂಶವೆಂದರೆ, ಇತ್ತೀಚಿನ ವರ್ಷಗಳಲ್ಲಿ ಹೆಣ್ಣು ಮಕ್ಕಳ ಜನನ ಸಂಖ್ಯೆಗಣನೀಯ ಮತ್ತು ಆಘಾತಕಾರಿ ಪ್ರಮಾಣದಲ್ಲಿ ಇಳಿಕೆ ಗೊಂಡಿರುವುದರ ಬಗೆಗೆ (1000 : 940 ಕ್ಕೆ ಇಳಿದಿರುವುದು). ಇದನ್ನು ದಕ್ಷಿಣ ಭಾರತ ರಾಜ್ಯಗಳಲ್ಲಿ ಕಂಡು ಬಂದಿರುವ ಗಂಡು-ಹೆಣ್ಣು ಶಿಶು ಅನುಪಾತ ಕೋಷ್ಟಕದ ಮುಖಾಂತರ ವಿಶ್ಲೇಷಿಸಿದ್ದಾರೆ.

ಕ್ರಿ.ಶ.10-12ನೇ ಶತಮಾನದ ಈ ಆರಂಭಿಕ ಮಧ್ಯಕಾಲಾವಧಿಯಲ್ಲಿ ದಕ್ಷಿಣ ಭಾರತದ ಸಾಹಿತ್ಯ ವಲಯದಲ್ಲಿ ಬೆಳವಣಿಗೆಗೊಂಡ ಒಂದು ಮಹತ್ತರ ವಿದ್ಯಮಾನವೆಂದರೆ ಸ್ಥಳೀಯ ಭಾಷೆ – ಕನ್ನಡ, ತೆಲುಗು, ತಮಿಳು ಮತ್ತು ಮಳಯಾಳಂ ಗಳಲ್ಲಿ ಸಾಹಿತ್ಯ ರಚನೆಗೊಂಡದ್ದು. ಕ್ರಿ.ಶ. ಮೊದಲ ಸಹಸ್ರಮಾನದ ಅಂಚಿನಲ್ಲಿ ಈ ಎಲ್ಲ ಭಾಷೆಗಳ ಸಾಹಿತ್ಯದ ಮೂಲವಸ್ತುವಾಗಿ ರಾಮಾಯಣ ಮತ್ತು ಮಹಾಭಾರತದ ಕಥಾನಕಗಳು ಮತ್ತು ತಮಿಳು ಭಕ್ತಿ ಸಂತರ ಜೀವನ ಚರಿತ್ರೆ ಆಧಾರಿತ ಪುರಾಣಗಳು ಮೂಡಿಬಂದದ್ದು.

ಹಿರೊಶಿ ಯಮಶಿತ ತಮ್ಮ ಲೇಖನದಲ್ಲಿ ತಮಿಳು ಸಾಹಿತ್ಯವನ್ನು ಪ್ರಧಾನವಾಗಿಟ್ಟು ಕೊಂಡು ಅಂದು ದ್ರಾವಿಡ ಭಾಷೆಗಳಲ್ಲಿ ಆದ ಸಾಹಿತ್ಯ ಸಂಚಲನವನ್ನು; ಅದರಲ್ಲೂ ತಮಿಳು ಸಾಹಿತ್ಯ ರಚನೆಯಲ್ಲಿ ಆದ ಈ ಸಂಚಲನೆಗೆ ಅಂದಿನ ರಾಜಕೀಯ, ಸಮಾಜ, ಸಂಸ್ಕೃತಿಯಲ್ಲಿ ಕಂಡುಬಂದ ಸ್ಥಿತ್ಯಂತರಗಳೆಂದು ಕೆಲವು ದೃಷ್ಟಾಂತಗಳ ಮುಖಾಂತರ ವಿಶ್ಲೇಷಿಸುತ್ತಾರೆ.

ಒತಾ ನೊಬುಹಿರೊ ಕ್ರಿ.ಶ.15ನೇ ಶತಮಾನದಿಂದ 19 ನೇ ಶತಮಾನದವರೆಗಿನ ರಾಜಕೀಯ ಮತ್ತು ಆರ್ಥಿಕ ವಿದ್ಯಮಾನಗಳಾದ- ದಕ್ಷಿಣ ಭಾರತಕ್ಕೆ ಯೂರೋಪಿಯನ್ನರು ಆಗಮಿಸಿದ್ದು: ಇಲ್ಲಿನ ಅವರ ವ್ಯಾಪಾರ ವಹಿವಾಟುಗಳು: ಅವರು ಇಲ್ಲಿನ ರಾಜಕೀಯ ಏಕಸ್ವಾಮ್ಯಕ್ಕಾಗಿ ನಡೆಸಿದ ಪ್ರಯತ್ನಗಳು ಹಾಗೂ ಇಲ್ಲಿನ ದಖನಿ ಸುಲ್ತಾನ ಮತ್ತು ಮೈಸೂರು ರಾಜ್ಯಗಳ ಸ್ವರೂಪ ಕುರಿತಾದ ಸುದೀರ್ಘ ಚರ್ಚೆಗಳನ್ನು ನಡೆಸಿದ್ದಾರೆ.

ಹದಿನೆಂಟು-ಹತ್ತೊಂಬತ್ತನೇ ಶತಮಾನದ ದಕ್ಷಿಣ ಭಾರತದ ರಾಜಕೀಯ ವಿದ್ಯಮಾನಗಳನ್ನು ಚರ್ಚಿಸುತ್ತಾ, ಸೈನಿಕ ಸಾಮರ್ಥ್ಯದ ಪ್ರಾಬಲ್ಯ ಮತ್ತು ವಿಸ್ತೃತ ಆದಾಯ ಮೂಲಗಳ ಅನ್ವೇಷಣೆ- ಈ ಎರಡು ಮೈಸೂರು ಒಡೆಯ ಸಂಸ್ಥಾನ; ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಡಳಿತ ದೃಷ್ಟಾಂತಗಳ ಮೂಲಕ ತಿಳಿಸುತ್ತಾರೆ. ಆಟೋಮನ್ ಸಾಮ್ರಾಜ್ಯ ಮತ್ತು ಫ್ರಾನ್ಸಿನ ಜೊತೆ ಕೇವಲ ರಾಜ ತಾಂತ್ರಿಕ ಸಂಬಂಧವನ್ನಷ್ಟೆ ಹೊಂದಿರದೆ, ಎಲ್ಲಕ್ಕಿಂತ ಮಿಗಿಲಾಗಿ ಅಂದು ಸಕ್ರಿಯವಾಗಿದ್ದ ಸಾಗರೋತ್ತರ ವಿದೇಶಿ ವ್ಯಾಪಾರದಲ್ಲಿ ಲಾಭ ಪಡೆಯುವ ಹಾಗೂ ಆ ಮೂಲಕ 3ನೇ ಆಂಗ್ಲೊ-ಮೈಸೂರು ಕದನದಲ್ಲಿ ಸಂಭವಿಸಿದ್ದ ಅಪಾರ ನಷ್ಟವನ್ನು ಸರಿದೂಗಿಸುವ ಸಲುವಾಗಿ ಟಿಪ್ಪು ಸುಲ್ತಾನ್ ಈ ದೇಶಗಳೊಂದಿಗೆ ರಾಜಕೀಯ ಸಖ್ಯ ಬೆಳೆಸಿದನು ಎಂದು ಅಭಿಪ್ರಾಯ ಪಡುತ್ತಾರೆ.

ಇದೇ ಅಧ್ಯಾಯದಲ್ಲಿ ಕೈಕೊ ಯಮಾಡ ಮತ್ತು ತಕಾಕೊ ಇನೊವ್ ರವರು ಹೈದರಾಬಾದಿನ ನಿಜಾಮ ಹಾಗೂ ತಂಜಾವೂರು ರಾಜ್ಯಗಳ ಬಗ್ಗೆ ವಿಶ್ಲೇಷಿಸುತ್ತಾರೆ. ಉತ್ತರದ ಮೊಘಲರಿಂದ ಸ್ವತಂತ್ರಗೊಂಡ ಹೈದರಾಬಾದ್ ರಾಜ್ಯ ತನ್ನ ಸ್ವರೂಪದಲ್ಲಿ ಉಪ ಮೊಘಲ್ ಸಾಮ್ರಾಜ್ಯದಂತೆಯೇ ಉಳಿದಿತ್ತು. ಹಾಗಾಗಿ ಇದೊಂದು ಸ್ಥಳೀಯ ರಾಜ್ಯ ಸಂಸ್ಥಾನವಾಗದೆ, ದಖಿನ್‌ನಲ್ಲಿ ಮೊಘಲ್ ಸಾಮ್ರಾಜ್ಯದ ಉತ್ತರಾಧಿಕಾರಿ ರಾಜ್ಯವೇ ಆಗಿತ್ತು. ಆದರೆ ರಾಜ್ಯ ಸ್ಥಾಪನೆಯಾದ ಕೇವಲ 75 ವರ್ಷಗಳಲ್ಲಿ ಅದು ಸಂಪೂರ್ಣವಾಗಿ ಬ್ರಿಟಿಷ್ ಸುಪರ್ದಿಗೆ ಬರಬೇಕಾಯಿತು. ಹೈದರಬಾದ್ ಸಂಸ್ಥಾನ ಶೀಘ್ರವಾಗಿ ದುರ್ಬಲಗೊಳ್ಳಲು ಪ್ರಮುಖ ಕಾರಣ- ಈ ವೇಳೆಗಾಗಲೇ ಇಲ್ಲಿನ ಪ್ರಸಿದ್ಧ ವಜ್ರ ವ್ಯಾಪಾರ ಕ್ಷೀಣಿಸಿದ್ದು; ಕೋರಮಂಡಲ ತೀರದಂತಹ ಸಾಗರೋತ್ತರ ವ್ಯಾಪಾರಕ್ಕೆ ಆಯಕಟ್ಟಿನ ಬಂದರು ಪ್ರದೇಶಗಳನ್ನು ಹೊಂದಿರದೆ, ಇದ್ದದ್ದು; ವಿದೇಶಿಯವಾಗಿ ಹೆಚ್ಚು ಬೇಡಿಕೆ ಹೊಂದಿದ್ದ ಹತ್ತಿಯಂತಹ ವಾಣಿಜ್ಯ ಬೆಳೆಗಳನ್ನು ಈ ಸಂಸ್ಥಾನದಾದ್ಯಂತ ಬೆಳೆಯಲಾಗದೇ, ಹೋದದ್ದು; ಹೈದರಾಬಾದ್ ನಂತಹ ಸೈನಿಕ ಮತ್ತು ಆರ್ಥಿಕ ಆಯಕಟ್ಟಿನಂತಹ ನಗರಗಳು ಈ ಸಂಸ್ಥಾನದಾದ್ಯಂತ ಬೆಳೆಯಲಾಗದೇ ಇದ್ದದ್ದು. ಹೀಗೆ ತಮ್ಮ ಸಂಶೋಧನೆಯ ಮೂಲಕ ಹೈದರಾಬಾದ್ ಸಂಸ್ಥಾನ ಪತನಗೊಳ್ಳಲು ಇದ್ದ ವಿಭಿನ್ನ ಕಾರಣಗಳನ್ನು ಪತ್ತೆ ಹಚ್ಚಿ ವಿಶ್ಲೇಷಿಸಿರುವುದು ಇವರ ವೈಶಿಷ್ಟ್ಯವಾಗಿದೆ.

ತಕಾಕೊ ಇನೊವ್ ಅವರು ತಂಜಾವೂರು ಮರಾಠ ರಾಜ್ಯದ ಬಗ್ಗೆ ಪ್ರಸ್ತಾಪಿಸುತ್ತಾ, ಮರಾಠರು ತಮ್ಮ ನೆರೆಯ ರಾಜ್ಯ ಮಧುರೈ, ರಾಮನಾಡ್, ಮೈಸೂರು ಮತ್ತು ಉತ್ತರದ ಮೊಘಲರ ವಿರುದ್ಧ ಸೆಣಸಿದ ಬಗೆ ಹಾಗೂ ಮುಂದೆ 1855 ರಲ್ಲಿ ಡಾಲ್‌ಹೌಸಿಯ ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿಗೆ ಒಳಪಡುವವರೆಗೆ ಈ ಮರಾಠ ರಾಜ್ಯವು ಸಾಹಿತ್ಯ ಮತ್ತು ಕಲೆಗೆ ವಿಶೇಷವಾಗಿ ಚಿತ್ರಕಲೆ ಮತ್ತು ಸಂಗೀತಕ್ಕೆ ನೀಡಿದ ಪ್ರೋತ್ಸಾಹದ ಬಗ್ಗೆ ವಿವರಿಸುತ್ತಾರೆ.

ಈ ಇರ್ವರು ವಿದ್ವಾಂಸರು 20ನೇ ಶತಮಾನದ ಭಾಷಾವಾರು ಪ್ರಾಂತ್ಯ ರಚನೆ, ದೇವದಾಸಿ ಪದ್ಧತಿಗಳಂತ ಜ್ವಲಂತ ವಿದ್ಯಮಾನಗಳ ಜೊತೆಗೆ ಕಳೆದ ಶತಮಾನದಲ್ಲಿ ಸಂಗೀತ ಮತ್ತು ದೃಶ್ಯ ಮಾಧ್ಯಮ 'ಸಿನಿಮಾ' ಬೆಳೆದುಬಂದ ಬಗಗೆ ಚರ್ಚಿಸುತ್ತಾರೆ. ಕೈಕೊ ಯಮಾಡ ಅವರು ಒಕ್ಕೂಟ ಆಂಧ್ರ ರಚನೆಯ ಆಂದೋಲನವನ್ನು

ಪ್ರಧಾನವಾಗಿರಿಸಿಕೊಂಡು ಹೇಗೆ ಮುಂದೆ ಮೈಸೂರು, ಮದ್ರಾಸ್ ಮತ್ತು ಕೇರಳಾ ರಾಜ್ಯಗಳು ಭಾಷಿಕ ಆಧಾರದ ಮೇಲೆ ರೂಪು ತಳೆದವು ಎಂಬುದನ್ನು ವಿವರಿಸಿದ್ದಾರೆ.

ಪ್ರಾಚೀನ ದಕ್ಷಿಣ ಭಾರತದ ಸಮಾಜದಲ್ಲಿ ಮನ್ನಣೆ ಮತ್ತು ಸಾಂಸ್ಥೀಕರಣ ಸ್ವರೂಪವನ್ನು ಪಡೆದುಕೊಂಡಿದ್ದ ದೇವದಾಸಿ ಪದ್ಧತಿ 20ನೇ ಶತಮಾನದಲ್ಲಿ ಅದರ ಪರಿಕಲ್ಪನೆ ಬದಲಾಗಿ ಅದು ವಿಘಟನೆಹೊಂದಿದುರ ಮತ್ತು ಬೇರೆ ಬೇರೆ ದೃಷ್ಟಿಕೋನಗಳಲ್ಲಿ ಅದರ ಪರ-ವಿರೋಧ ವಾಗ್ವಾದಗಳನ್ನು ; ಮತ್ತು ದೇವದಾಸಿ ನೃತ್ಯ ಈ ಸಂದರ್ಭದಲ್ಲಿ 'ಭರತನಾಟ್ಯ' ಎಂಬ ಹೊಸ ಅವತರಣಿಕೆಯನ್ನು ಪಡೆದು ಅದು ದೇಶ ವಿದೇಶಗಳಲ್ಲಿ ಖ್ಯಾತಿಯನ್ನು ಗಳಿಸಿಕೊಂಡದ್ದರ ಬಗ್ಗೆ ತಕಾಕೊ ಇನೊವ್ ಸ್ಥೂಲವಾಗಿ ಚರ್ಚಿಸಿದ್ದಾರೆ.

ಇನ್ನು ಆಧುನಿಕ ತಿರುವಾಂಕೂರು ರಾಜ್ಯ ಉದಯದ ಬಗ್ಗೆ ಚರ್ಚಿಸುವ 'ತೊಷಿ ಅವಾಯ', ಕ್ರಿ.ಶ.18ನೇ ಶತಮಾನದಲ್ಲಿ ಮೊಘಲ್ ಅವನತಿಯ ಸಂದರ್ಭದಲ್ಲಿ ಭಾರತಾದ್ಯಂತ ಪ್ರಾಂತೀಯ ರಾಜ ಮನೆತನಗಳ ಆಳ್ವಿಕೆ ಅಸ್ಥಿತ್ವಕ್ಕೆ ಬಂದಂತೆಯೇ, ತಿರುವಾಂಕೂರಿನಲ್ಲೂ ಆಧುನಿಕ ಸ್ವತಂತ್ರ ತಿರುವಾಂಕೂರು ರಾಜ್ಯ ಏಳಿಗೆಗೆ ಬಂದದ್ದನ್ನು; ಮಾರ್ತಾಂಡವರ್ಮ 1729 ರಲ್ಲಿ ಈ ರಾಜ್ಯ ಸ್ಥಾಪಿಸಿದ ಸಂದರ್ಭದಲ್ಲಿ ಹೇಗೆ ಅಂದು ಆರ್ಥಿಕವಾಗಿ ಬಲಾಢ್ಯಗೊಂಡಿದ್ದ ಮತ್ತು ಸಮಾಜದಲ್ಲಿ ತಮ್ಮದೇ, ಖಾಸಗಿ ಅಧಿಪತ್ಯವನ್ನು ಹೊಂದಿದ್ದ, ಪದ್ಮನಾಭಸ್ವಾಮಿ ದೇವಾಲಯದ ನಿರ್ವಾಹಕರಾದ ಯಾಗಕ್ಕಾರ ಬ್ರಾಹ್ಮಣ ಸಮುದಾಯ, ಸ್ಥಳೀಯ ಪರಂಪರಾಗತ ಮುಖ್ಯಸ್ಥರಿಂದ ಮತ್ತು ಮಾಡಂಪಿಯರು, ಪಿಳ್ಳಾಮಾರರೆಂದು ಕರೆಯುತ್ತಿದ್ದ ಪ್ರಬಲ ಜಮೀನುದಾರ ವರ್ಗದವರಿಂದ ಹೀಗೆ ಸಮಾಜದ ವಿವಿಧ ಪ್ರಬಲ ವರ್ಗಗಳಿಂದಲೂ ರಾಜ್ಯ ರಚನೆಗೆ ಎದುರಾದ ಪೈಪೋಟಿ ಎದುರಿಸಬೇಕಾದದ್ದನ್ನು ವಿಷದೀಕರಿಸುತ್ತಾರೆ. ಅಂದಿನ ವ್ಯಾಪಾರ-ವಹಿವಾಟಿನಲ್ಲಿ ರಾಜ್ಯ ಸಕ್ರಿಯವಾಗಿ ಪಾಲ್ಗೊಂಡು ಅದರಿಂದ ಬಂದ ಹೇರಳ ಆದಾಯದ ಸಹಾಯದಿಂದ, ಬ್ರಿಟಿಷರಿಂದ ಆಧುನಿಕ ಶಸ್ತ್ರಾಸ್ತ್ರಗಳನ್ನು ಖರೀದಿಸಿ ರಾಜ್ಯ ವಿಸ್ತರಣೆಯಲ್ಲಿ ತೊಡಗಿದುದು; ದಕ್ಷಿಣ ಭಾರತದಲ್ಲಿಯೇ ಪ್ರಬಲರಾಜ್ಯವಾಗಿ ಬೆಳೆದಿದ್ದ ಟಿಪ್ಪು 1792 ರ 3ನೇ ಆಂಗ್ಲೊ-ಮೈಸೂರು ಕದನದಲ್ಲಿ ಕಂಡ ಹೀನಾಯ ಸೋಲು ದಕ್ಷಿಣದ ಇತರ ರಾಜ್ಯಗಳೂ ಬ್ರಿಟಿಷರ ತೆಕ್ಕೆಗೆ ಬರುವಂತಾಗಲು, ತಿರುವಂಕೂರು ರಾಜ್ಯವೂ ಅದರಲ್ಲಿ ಒಂದಾಯಿತು ಎಂಬುದನ್ನು ಅವಾಯ ಇದೇ ಅಧ್ಯಾಯದಲ್ಲಿ ತಿಳಿಸಿಕೊಡುತ್ತಾರೆ.

ಅವಾಯ ಕೇರಳಾದಲ್ಲಿ ಪರಂಪರಾಗತವಾಗಿ ಬಂದಿದ್ದ ಮಾತೃ ಪ್ರಧಾನ ವ್ಯವಸ್ಥೆ 20ನೇ ಶತಮಾನದಲ್ಲಿ ಹೇಗೆ ಬ್ರಿಟಿಷರ ಆಧುನಿಕ ನೀತಿಗಳಿಂದಾಗಿ ಅವಿಭಕ್ತ ಕುಟುಂಬಗಳು ವಿಘಟನೆ ಹೊಂದಿ ಆಧುನಿಕ ಕಾಲದ ಅನಿವಾರ್ಯ ಪರಿಸ್ಥಿತಿಗಳಲ್ಲಿ ಸಣ್ಣ ಸಣ್ಣ ಕುಟುಂಬಗಳಾಗಿ ಮಾರ್ಪಟ್ಟು, ಹಿಂದಿನ ಮಾತೃ ಪ್ರಧಾನ ವ್ಯವಸ್ಥೆ ಅಪ್ರಸ್ತುತವಗಿದ್ದರ ಬಗ್ಗೆಯೂ ಚರ್ಚಿಸಿದ್ದಾರೆ.

ಕ್ರಿ.ಶ.16ನೇ ಶತಮಾನದ ಬಳಿಕ, ಯೂರೋಪಿಯನ್ನರ ಆಗಮನದ ತರುವಾಯ ಸಾಗರೋತ್ತರ ವ್ಯಾಪಾರದ ಫಲವಾಗಿ ಇಲ್ಲಿ ಬೆಳವಣಿಗೆಗೊಂಡ ಉದ್ದಿಮೆಗಳು; ಕರಾವಳಿ ತೀರ ನಗರಗಳು; ಈ ಅವಧಿಯಲ್ಲಿ ವ್ಯಾಪಾರ ವಹಿವಾಟುಗಳು ಮತ್ತಷ್ಟು ಚುರುಕುಗೊಳ್ಳಲು ಯೂರೋಪ್ ಮತ್ತು ಆಗ್ನೇಯ ಏಷ್ಯಾದಿಂದ ಹರಿದು ಬಂದ ಲೋಹಗಳಾದ ಚಿನ್ನ,

ಬೆಳ್ಳಿ ತಾಮ್ರ; ಜೊತೆಗೆ ಬ್ರಿಟಿಷರು ದೇಶೀಯ ಅರಸರಿಂದ ನಾಣ್ಯ ಟಂಕಿಸುವ ಅಧಿಕಾರ ಪಡೆದು ಇಲ್ಲಿನ ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸಿದ್ದು; ಜವಳಿ ರಫ್ತು ಪ್ರಕ್ರಿಯೆಯಲ್ಲಿ ಕೇವಲ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯಷ್ಟೆ ಪಾಲ್ಗೊಳ್ಳದೆ, ಇತರ ಖಾಸಗಿ ವ್ಯಾಪಾರಸ್ಥರು, ಭಾರತೀಯ ವ್ಯಾಪಾರಸ್ಥರು ಈ ಜವಳಿ ರಫ್ತು ವ್ಯಾಪಾರದಲ್ಲಿ ಪಾಲ್ಗೊಂಡ ಬಗೆಯನ್ನು ಝುಕಾಸ ಮಿಜುಶಿಮಾ ಅವರು '18ನೇ ಶತಮಾನದಲ್ಲಿ ದಕ್ಷಿಣ ಭಾರತ ಜಾಗತಿಕ ಆರ್ಥಿಕ ಪರಿಧಿಯೊಳಗೆ ಬಂದ ಬಗೆ' ಕುರಿತು ಲೇಖನದಲ್ಲಿ ವಿವರಿಸುತ್ತಾರೆ.

ನಂತರ ಇದೇ ಲೇಖಕರು ಕ್ರಿ.ಶ.19ನೇ ಶತಮಾನದಲ್ಲಿ ವಸಾಹತುಶಾಹಿ ಪ್ರಭುತ್ವ ಭೂ ಕಂದಾಯ ವ್ಯವಸ್ಥೆ ಹಿಂದಿನ ಕಂದಾಯ ವಸೂಲಿ ಜಮೀನುದಾರವರ್ಗ 'ಮಿರಾಸಿ ಪದ್ಧತಿ' ಮತ್ತು 'ಪಾಯಕ್ಕಾರ ವ್ಯವಸ್ಥೆ'(ಗುಡ್ಡಗಾಡು ಪ್ರದೇಶಗಳಲ್ಲಿ ಅಥವಾ ಒಡಯನೇ ಇಲ್ಲದಂತಹ ಭೂ ಪ್ರದೇಶದಲ್ಲಿ 'ಪಾಯಕ್ಕಾರ'ರೆಂಬ ಒಕ್ಕಲು ವರ್ಗ ಅಂತಹ ಭೂ ಪ್ರದೇಶದಲ್ಲಿ ನೆಲೆನಿಂತು ಭೂಮಿಯನ್ನು ಉಳುಮೆಗೆ ಒಳಪಡಿಸಿದ ಪಾಯಕ್ಕಾರ ವರ್ಗ)- ಇವುಗಳಿಗೆ ಪರ್ಯಾಯವಾಗಿ ಬೆಳೆದದ್ದು; ಬ್ರಿಟಿಷರ ಈ ಭೂ ಕಂದಾಯ ವ್ಯವಸ್ಥೆ(ರೈತವಾರಿ ಮತ್ತು ಜಮೀನುದಾರಿ ವ್ಯವಸ್ಥೆ) ಭಾರತೀಯ ನೆಲದಲ್ಲಿ ಜಾರಿಗೊಂಡ ಬಳಿಕ ಇಲ್ಲಿನ ಜಮೀನುದಾರರ ಸ್ಥಿತಿ-ಗತಿಯ ಬಗ್ಗೆಯೂ ಅವರ ಅಧ್ಯಯನಗಳು ತಿಳಿಸುತ್ತವೆ.

ಕ್ರಿ.ಶ.19ನೇ ಶತಮಾನದಲ್ಲಿ ಬ್ರಿಟಿಷ್ ವಸಾಹತುಶಾಹಿ ಪ್ರಭುತ್ವ ಕಾನೂನು ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ತಂದ ಸುಧಾರಣೆಗಳು ದಕ್ಷಿಣ ಭಾರತದ ಸಮಾಜದಲ್ಲಿ ಅದು ಬೀರಿದ ಪ್ರಭಾವ- ಈ ವಿದ್ಯಮಾನಗಳ ಕುರಿತಾಗಿ ಮಿವಾಕೊ ಶಿಗಾ ಅವರು ಕೋಷ್ಟಕಗಳ ಮುಖಾಂತರ ಅಂಕಿ-ಅಂಶಗಳ ಸಹಿತ ಸಂಕ್ಷಿಪ್ತವಾಗಿಯಾದರೂ, ಪರಿಣಾಮಕಾರಿಯಾಗಿ ವಿಶ್ಲೇಷಿಸಿದ್ದಾರೆ.

ಮಿವಾಕೊ ಶಿಗಾ ಅವರು ಬ್ರಿಟಿಷರು ತಂದ ಕಾನೂನು, ಶೈಕ್ಷಣಿಕ ಮತ್ತು ಆಡಳಿತಾತ್ಮಕ ಸುಧಾರಣೆಗಳಿಂದಾಗಿ ಹಿಂದೆಂದಿಂಗಿಂತ ಹೆಚ್ಚಾಗಿ ಇಲ್ಲಿ 'ಸಮುದಾಯ' ಪ್ರಜ್ಞೆ ಬೆಳೆದು, ಇದರ ಫಲವಾಗಿ ತಮಿಳು ಪ್ರದೇಶದಲ್ಲಿ ಹೊಸ ಒಂದು ರೀತಿಯ ಪುನರುಜ್ಜೀವನ ಆರಂಭವಾಗಿ ತಮಿಳು 'ಐಡೆಂಟಿಟಿ' ಗಳಿಸಿಕೊಳ್ಳುವತ್ತ ಸಾಗಿದ್ದರ ಬಗ್ಗೆ ವಿವರಿಸುತ್ತಾರೆ. ಮುಂದಿನ ಶತಮಾನದ ವೇಳೆಗೆ ಅಬ್ರಾಹ್ಮಣ ಚಳುವಳಿ ವ್ಯಾಪಕವಾಗಿ ಹರಡಿದ್ದು ಇದಕ್ಕೊಂದು ನಿದರ್ಶನ.

ಅಬ್ರಾಹ್ಮಣ ಚಳುವಳಿಗಳು ತಮಿಳುನಾಡಿನಲ್ಲಿ ತಮಿಳು ರಾಷ್ಟ್ರೀಯತೆಯನ್ನು ಬೆಳೆಸಿದ್ದಷ್ಟೆ ಅಲ್ಲದೆ, ರಾಜಕೀಯವಾಗಿ ಮುಂಚೂಣಿಗೆ ಬರಲು ಶ್ರಮಿಸಿತು. ಇದರ ಫಲವಾಗಿ ಸ್ವಾತಂತ್ರ್ಯೋತ್ತರದಲ್ಲಿ ದ್ರಾವಿಡ ಪಕ್ಷಗಳು ರಾಜಕೀಯವಾಗಿ ಪ್ರಬಲಗೊಂಡು ಇಂದಿಗೂ ತಮ್ಮ ರಾಜಕೀಯ ನಿಯಂತ್ರಣವನ್ನು ಸಾಧಿಸಿದ್ದನ್ನು; ಮತ್ತು ಸ್ವಾತಂತ್ರ್ಯಪೂರ್ವದಲ್ಲಿ ಆದ ಬೆಳವಣಿಗೆಗಳು ಭಾರತ ರಾಷ್ಟ್ರೀಯ ಕಾಂಗ್ರೆಸ್ ನಲ್ಲಿ ತಮಿಳುನಾಡು ಮಟ್ಟಕ್ಕೆ ಈ ಚಳುವಳಿಗಳ ಮಾದರಿಯಲ್ಲಿಯೇ, ಅಬ್ರಾಹ್ಮಣರನ್ನು ಓಲೈಸುವ ಸಲುವಾಗಿ ಕೆಲವೊಂದು ಮಾರ್ಪಾಡುಗಳನ್ನು ಮಾಡಿಕೊಂಡಿದ್ದರ ಬಗ್ಗೆ ಲೇಖಕರರು ಚರ್ಚಿಸಿದ್ದಾರೆ.

ಇನ್ನು ಅಂತಿಮವಾಗಿ, ಪರಾಕು ಯಸಗೀಸವ ಅವರು, ದಕ್ಷಿಣ ಭಾರತದಲ್ಲಿ ಕಳೆದ ಶತಮಾನದಲ್ಲಿ ಕಂಡು ಬಂದ ಕೈಗಾರಿಕಾ ಪ್ರಗತಿ ಮತ್ತು ಕೃಷಿ ವಲಯದಲ್ಲಿ ಆದ

ಬದಲಾವಣೆಗಳನ್ನು ಗುರುತಿಸಿದ್ದಾರೆ. ಅದುವರೆವಿಗೆ ಸ್ಥಳೀಯ ಬೇಡಿಕೆಗಳಿಗನುಗುಣವಾಗಿ ಉತ್ಪಾದಿಸಲ್ಪಡುತ್ತಿದ್ದ, ಜವಳಿ ಉತ್ಪನ್ನ ಹೊಸ ತಂತ್ರಜ್ಞಾನವನ್ನು ಅಳವಡಿಸಿಕೊಂಡು, ದೂರದ ಊರುಗಳಿಗೂ ಪೂರೈಸುವಂತಹ ಮಾರುಕಟ್ಟೆಯನ್ನು ಶ್ರೀಮಂತ ವರ್ತಕವರ್ಗ ಸೃಷ್ಟಿಸಿಕೊಂಡಿತು. ಹೀಗೆ ಹತ್ತೊಂಬತ್ತನೇ ಶತಮಾನದಲ್ಲಿ ಜವಳಿ ಉತ್ಪನ್ನದ ತಾಂತ್ರಿಕ ಪ್ರಗತಿ ಮತ್ತು ಮಾರುಕಟ್ಟೆಗಳಲ್ಲಿ ಆದ ಸ್ಥಿತ್ಯಂತರಗಳನ್ನು ಲೇಖಕರು ಗುರುತಿಸುತ್ತಾರೆ. ಹಾಗೇಯೆ, ಕೃಷಿ ಸಮಾಜದಲ್ಲಿ ಆದ ಬದಲಾವಣೆಗಳ ಬಗ್ಗೆ ಉಲ್ಲೇಖಿಸುತ್ತಾ, ಮೂಲ ಸೌಕರ್ಯವಲಯದಲ್ಲಿ ಬ್ರಿಟಿಷರು ತಂದ ಆಮೂಲಾಗ್ರ ಸುಧಾರಣೆ ಫಲವಾಗಿ ಕೃಷಿರಂಗದಲ್ಲೂ ಸಹ ವ್ಯಾಪಕ ರಚನಾತ್ಮಕ ಬದಲಾವಣೆಗಳು ಕಂಡದ್ದನ್ನು; ಅಂತೆಯೇ, ಕೃಷಿ ಕೂಲಿಕಾರ್ಮಿಕ ವರ್ಗ ಎಸ್ಟೇಟ್‌ಗಳಿಗೆ ವಲಸೆ ಹೋದರೆ, ಜಮೀನುದಾರವರ್ಗ ನಗರ ಪ್ರದೇಶಗಳಿಗೆ ವಲಸೆ ಹೋದದ್ದು ಮತ್ತು ಇದರಿಂದಾಗಿ ಆರ್ಥಿಕವಲ್ಲದ ಕೃಷಿ ಭೂ ಹಿಡುವಳಿಗಳ ಸೃಷ್ಟಿ ಮತ್ತು ದಕ್ಷಿಣ ಭಾರತದ ಕೃಷಿ ಆರ್ಥಿಕ ವ್ಯವಸ್ಥೆಯು ಈ ವಸಾಹತುಶಾಹಿ ಪ್ರಭುತ್ವದ ಮುಖಾಂತರ ಜಾಗತಿಕ ವ್ಯಾಪಾರದ ಪರಿಧಿಗೆ ಒಳಪಟ್ಟಿದ್ದು; ಮತ್ತು ಇದರಿಂದ ಸ್ಥಳೀಯವಾಗಿ ಆದ ದುಷ್ಪರಿಣಾಮಗಳನ್ನು ಸಹ ವಿವರಣಾತ್ಮಕ ಕೋಷ್ಠಕಗಳ ಸಹಾಯದಿಂದ ಪರಿಣಾಮಕಾರಿಯಾಗಿ ವಿಶ್ಲೇಷಿಸುತ್ತಾರೆ.

ಸ್ವಾತಂತ್ರ್ಯೋತ್ತರ ಭಾರತ ತಮಿಳುನಾಡಿನಲ್ಲಿ ಕೈಗಾರಿಕಾ ಪ್ರಗತಿ ಗಣನೀಯ ಪ್ರಮಾಣದಲ್ಲಿ ಆದದ್ದನ್ನು ಮತ್ತು ಅದು ಜನತೆಯ ಮೇಲೆ ಬೀರಿದ ಸಕಾರಾತ್ಮಕ ಪ್ರಭಾವವನ್ನು ಲೇಖಕರು ಅಂಕಿ-ಅಂಶಗಳ ಸಹಾಯದಿಂದ ವಿವರಿಸುತ್ತಾರೆ. ಜೊತೆಗೆ ಕೃಷಿ ಕ್ಷೇತ್ರದಲ್ಲಿಯೂ ಮಹತ್ತರ ಸುಧಾರಣೆಗಳು ಸರ್ಕಾರಿ ವತಿಯಿಂದ ಕೈಗೊಳ್ಳಲಾಯಿತು. ಅದರಲ್ಲಿ ಭೂ ಸುಧಾರಣೆ, ನೀರಾವರಿ ಸೌಲಭ್ಯ, ಮಾರುಕಟ್ಟೆ ಸೌಲಭ್ಯ, ಗೇಣಿ ಸುಧಾರಣೆ- ಹೀಗೆ ಲೇಖಕರು ಆರ್ಥಿಕ ವ್ಯವಸ್ಥೆಯ ಈ ಎರಡೂ ಕ್ಷೇತ್ರಗಳಲ್ಲಿ ಕಂಡು ಬಂದ ಪ್ರಗತಿ ಮತ್ತು ಸುಧಾರಣೆಗಳು ಹಾಗೂ ಅವು ಸಾಮಾಜಿಕ ರಚನೆಯಲ್ಲಿ ತಂದ ಸಾಧಕ-ಬಾಧಕಗಳನ್ನು ಅಂಕಿ-ಅಂಶಗಳ ಸಹಾಯದಿಂದ ಚರ್ಚಿಸಿದ್ದಾರೆ.

ಪ್ರಾಗೈತಿಹಾಸದಿಂದ ಸಮಕಾಲೀನ ಇತಿಹಾಸದವರೆಗೆ, ಕೇವಲ ಕಾಲಾನುಕ್ರಮಣಿಕೆಯ ರಾಜಕೀಯ ಘಟನಾವಳಿಗಳನ್ನು ತಿಳಿಸಿಕೊಡದೆ, ಅಧ್ಯಯನದ ವಿವಿಧ ಆಯಾಮಗಳನ್ನು ಕಟ್ಟಿಕೊಡುತ್ತಾ, ದಕ್ಷಿಣ ಭಾರತ ಇತಿಹಾಸದ ಹತ್ತು ಹಲವು ವಿಷಯಗಳ ಮೇಲೆ ಬೆಳಕು ಚೆಲ್ಲುವ ಸುಮಾರು 400 ಪುಟಗಳನ್ನೊಳಗೊಂಡ, ನೊಬೊರು ಕರಾಶಿಮಾ ಅವರ ಸಂಪಾದಕತ್ವದಲ್ಲಿ 13 ವಿದ್ವಾಂಸರು ತಮ್ಮ ಅಮೂಲ್ಯ ಕೊಡುಗೆಗಳನ್ನು ನೀಡುವ ಮೂಲಕ ಮೂಡಿಬಂದಿರುವ ಕೃತಿ *A Concise History Of South India- Issues and Interpretations*. ಇದು ಸಂಶೋಧನಾ ವಿಷಯದ ಆಯ್ಕೆ, ಸಂಶೋಧನಾ ಮಾದರಿ, ವಿಷಯ ವಸ್ತುವನ್ನು ನಿರ್ವಹಿಸುವ ಅಥವಾ ಅದನ್ನು ಪರಿಣಾಮಕಾರಿಯಾಗಿ ತಿಳಿಸಿ ಕೊಡುವ ವಿಧಾನ ಮೊದಲಾದ ವಿಚಾರಗಳಲ್ಲಿ ನವ ಸಂಶೋಧಕರಿಗೆ, ವಿದ್ವಾಂಸರಿಗೆ, ಅಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ ಹಾಗೂ ಆಸಕ್ತರೆಲ್ಲರಿಗೂ ಅತ್ಯುಪಯುಕ್ತವಾದುದಾಗಿದೆ. ಹೀಗೆ ಹಲವು ರೀತಿಯಲ್ಲಿ ಉಪಯುಕ್ತವಾಗಿರುವ ಈ ಆವೃತ್ತಿ ಒಂದು ಅಪರೂಪದ ಕೃತಿ ಎನ್ನುವುದರಲ್ಲಿ ಅತಿಶಯೋಕ್ತಿಯಿಲ್ಲ.

■

## ಪ್ರತಿಕ್ರಿಯೆ

# ಹಾಸ್ಯಾಸ್ಪದ ಹೇಳಿಕೆ

–ಕೆ.ಜಿ. ಗೋಪಾಲಕೃಷ್ಣರಾವ್
"ಶ್ರೀನಿವಾಸ", # 264/1, 44ನೇ ಕ್ರಾಸ್,
ಜಯನಗರ 5ನೇ ಬ್ಲಾಕ್, ಬೆಂಗಳೂರು.

ಮನು ವಿ. ದೇವದೇವನ್ ಅವರು ಬರೆದ ಪುರಿಜಗನ್ನಾಥ ದೇವಾಲಯದ ಇತಿಹಾಸವು ಇತಿಹಾಸ ದರ್ಪಣದಲ್ಲಿ ಕಂತುಗಳ ರೂಪದಲ್ಲಿ ಪ್ರಕಟವಾಗುತ್ತಿರುವುದು ಸರಿಯಷ್ಟೇ. ಆಳವಾದ ಅಧ್ಯಯನ, ಉತ್ತಮ ಹಿನ್ನಲೆಯ ಜ್ಞಾನ ಮತ್ತು ತೀಕ್ಷ್ಣ ಒಳನೋಟಗಳನ್ನು ಈ ಸರಣಿಯು ಒಳಗೊಂಡಿದೆ. ನಾನು, ಈ ವರೆಗೆ ಪ್ರಕಟವಾಗಿರುವ ಎಲ್ಲ ಭಾಗಗಳನ್ನು ಗಮನಿಸಿದ್ದೇನಾದರೂ, ಪ್ರತಾಪರುದ್ರ ಗಜಪತಿಗೆ ಸಂಬಂಧಿಸಿದ ಭಾಗವನ್ನು ವಿಶೇಷ ಆಸಕ್ತಿಯಿಂದ ಓದಿದ್ದೇನೆ (ಇತಿಹಾಸ ದರ್ಪಣ ಪುಸ್ತಕ : 21–22 ಸಂಯುಕ್ತ ಆವೃತ್ತಿ). ಉಳಿದ ಎಲ್ಲ ಭಾಗಗಳಂತೆ ಈ ಭಾಗವು ಅತ್ಯುತ್ತಮ ವಾಗಿದ್ದರೂ, ಹಲವು ಅಸಾಂಗತ್ಯಗಳು ಮತ್ತು ಸತ್ಯಕ್ಕೆ ದೂರವಾದ ಸಂಗತಿಗಳು, ಊಹೆಗಳು ಇಲ್ಲಿ ಮಿಳಿತವಾಗಿದ್ದು, ಒಟ್ಟಾರೆ, ಈ ಲೇಖನ ಮಾಲೆಗೆ ಮೊದಲ ಮೂರು ಭಾಗಗಳಲ್ಲಿ ಬಂದ ಶ್ಲಾಘನೆಯನ್ನು 4ನೇ ಭಾಗವು ಕೊಂಚ ಕಲುಷಿತಗೊಳಿಸಿದೆ ಎಂದೇ ಹೇಳಬೇಕು. ಈ ಕುರಿತಾದ ಕೆಲ ಉದಾಹರಣೆಗಳನ್ನು ಈಗ ನೋಡಬಹುದು.

1. ಪುಟ–62ರ ಕೊನೆಯ ಪ್ಯಾರದಲ್ಲಿ: "...1509ರಲ್ಲಿ ಹಂಪಿಯಲ್ಲಿ ಪಟ್ಟವೇರಿದ ಕೃಷ್ಣರಾಯ (1509–1529). ರಾಯನು 1512ರಲ್ಲಿ ಉದಯಗಿರಿಯ ಮೇಲೆ ಹಲ್ಲೆ ನಡೆಸಿದನು."

- ತುಳುವ ವಂಶದ ಈ ಚಕ್ರವರ್ತಿಯನ್ನು ಸಾಮಾನ್ಯವಾಗಿ ಎಲ್ಲರೂ ಹೆಸರಿಸುವಂತೆ ಕೃಷ್ಣದೇವರಾಯ ಎನ್ನದೇ ಕೃಷ್ಣರಾಯ ಎಂದಿರುವುದು ಅತ್ಯಂತ ಸಮಂಜಸವಾಗಿದೆ. ಇದೇ ಇತಿಹಾಸ ದರ್ಪಣದ ಸಂಚಿಕೆ–4ರಲ್ಲಿ ಪ್ರಕಟವಾದ ನನ್ನ ಲೇಖನದಲ್ಲಿ ಈ ಚಕ್ರವರ್ತಿಯ ಹೆಸರು ಕೃಷ್ಣದೇವರಾಯನಲ್ಲ; ಕೃಷ್ಣರಾಯ ಎಂದು ಆಧಾರ ಪೂರ್ವಕವಾಗಿ ತೋರಿಸಿದ್ದೇನೆ. ಹಾಗೂ ಈತನ

ಆಳ್ವಿಕೆಯು ಹಂಪಿಯ ವಿರೂಪಾಕ್ಷದೇವಾಲಯದ ಶಾಸನವೇ ಹೇಳುವಂತೆ 1510ರಲ್ಲಾಯಿತೆ ಹೊರತು 1509ರಲ್ಲಿ ಅಲ್ಲ. ರಾಯನ ಉದಯಗಿರಿಯ ಮೇಲಿನ ದಂಡಯಾತ್ರೆಯು ಆರಂಭವಾದದ್ದು 1513ನೆಯ ಇಸವಿಯ ರಾಮದಶಮಿಯಂದು (ಬಹುಶಃ ಮಾರ್ಚ್, ಏಪ್ರಿಲ್ ತಿಂಗಳು). ಇದಕ್ಕೆ ವೆಂಕಟಪತಿ ದೇವರಾಯನ ಕಾಲದ ವಿಜಯನಗರ ಸಾಮ್ರಾಜ್ಯವು ಎಂಬ ಗ್ರಂಥದಲ್ಲಿ ಆಧಾರ ಸಿಗುತ್ತದೆ.

2. ಪುಟ-63ರಲ್ಲಿ: "ಹೀಗಾಗಿ ಕೋಟೆಯನ್ನು ವಶಪಡಿಸಿಕೊಳ್ಳಲು ಕೃಷ್ಣರಾಯನಿಗೆ ಒಂದು ವರ್ಷವೇ ಬೇಕಾಯಿತು".

- ಉದಯಗಿರಿ ಕೋಟೆಯನ್ನು ಗೆಲ್ಲಲು ರಾಯನಿಗೆ ಒಂದೂವರೆ ವರ್ಷವೇ ಹಿಡಿಯಿತು. ನ್ಯೂನಿಜ್‌ನು ತನ್ನ ವರದಿಯಲ್ಲಿ ಇದನ್ನು ಉಲ್ಲೇಖಿಸುತ್ತಾನೆ (Vasundhara F.,(Ed.) *Vijayanagara*, Page:151, N.B.T: New Delhi). ಇದರ ಜೊತೆಗೆ ಉದಯಗಿರಿ ವಶವಾದ ಬಗ್ಗೆ 1514ರ ಮಧ್ಯಭಾಗದಲ್ಲಿ ರಾಯನು ಹಾಕಿಸಿದ ಶಾಸನವೂ ಇದೆ.

3. ಅದೇ ಪುಟದಲ್ಲಿ: "ವಿಜಯನಗರ ಸೈನ್ಯವು ಅಡ್ಡಂಕ್ಕಿ, ವಿನುಕೊಂಡಾ, ಬೆಲ್ಲಮಕೊಂಡಾ, ನಾಗಾರ್ಜುನ ಕೊಂಡಾ, ಕೆತವರಂ ವಗೇರೆ ಹಲವು ಸಣ್ಣಪುಟ್ಟ ಕೋಟೆಗಳನ್ನು ವಶಪಡಿಸಿಕೊಂಡಿತು."

- ಈ ಕೋಟೆಗಳಲ್ಲಿ ಯಾವುದೂ ಸಣ್ಣಪುಟ್ಟದಲ್ಲಾ; ಎಲ್ಲವೂ ಗಜಪತಿ ಸಾಮ್ರಾಜ್ಯದ ದಕ್ಷಿಣ ಭಾಗದಲ್ಲಿ ದ್ವಾರದೋಪಾದಿಯಲ್ಲಿ ಇದ್ದದ್ದರಿಂದ ಜಗಪತಿಯು ಈ ಕೋಟೆಗಳನ್ನು ಭದ್ರಪಡಿಸಿ ಅವುಗಳಲ್ಲಿ ಪ್ರಬಲವಾದ ಠಾಣ್ಯವನ್ನಿರಿಸುದುದಕ್ಕೆ ರಾಯವಾಚಕಂನಲ್ಲಿ ಆಧಾರಗಳಿವೆ.

4. ಅದೇ ಪುಟದಲ್ಲಿ: ಕಟಕವನ್ನು ಮುತ್ತಿ ಆ ನಗರವನ್ನು ಸುಟ್ಟು ಭಸ್ಮವಾಗಿಸಿ ಪ್ರತಾಪರುದ್ರನನ್ನು ಶರಣಾಗಲು ರಾಯನು ನಿರ್ಬಂಧಿಸಿದನೆಂದು ವಿಜಯನಗರ ಮೂಲದ ಆಕರಗಳು ಹೇಳಿಕೊಂಡಿವೆ.

- ಸಾಹಿತ್ಯಾಧಾರ ಒಂದೇ ಅಲ್ಲ, ಶಾಸನಾಧಾರವೂ ಉಂಟು. ಶಾಸನ ಸಂಖ್ಯೆ-79, *ಟಿ.ಟಿ.ಡಿ. ಇನ್ಸ್‌ಕ್ರಿಪ್ಷನ್ಸ್ ಸಂಪುಟ-3.*

5. ಅದೇ ಪುಟದಲ್ಲಿ: "ರಾಯನು ಪ್ರತಾಪರುದ್ರನ ಕೈಯಲ್ಲಿ ಹೀನಾಯಾನವಾಗಿ ಸೋಲನ್ನು ಅನುಭವಿಸಿರುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು."

- ರಾಯನ ಸೋಲನ್ನು ಕುರಿತ ಒಂದೇಒಂದು ಉಲ್ಲೇಖ ವಿಜಯನಗರದ ಆಕರಗಳಲ್ಲಿರಲಿ; ಒರಿಸ್ಸಾದ ಆಕರಗಳಲ್ಲಿಯೂ ಇಲ್ಲ. ರಾಯನು ಸೋತಿದ್ದರೆ ಒರಿಸ್ಸಾದ ಆಕರಗಳು: ಮಾದಲಾಪಾಂಜಿಯಾದರು ಖಂಡಿತ ಉಲ್ಲೇಖಿಸುತ್ತಿತ್ತು. ಈ ಹಿಂದೆ "ಕಂಚಿಕಾವೇರಿ" ಘಟನೆಯಲ್ಲಿ ಗಜಪತಿಯ ವಿಜಯವನ್ನು, ಸಾಳ್ವನರಸಿಂಹನ ಸೋಲನ್ನು ವಿವರಿಸುವ ಒರಿಸ್ಸಾದ ಮಾದಲಾಪಾಂಜಿಯು ಸೇರಿದಂತೆ ಒರಿಸ್ಸಾದ ಆಕರಗಳು ಈ ವಿಜಯವನ್ನು ಹೆಸರಿಸದೆ ಬಿಡುತ್ತಿರಲಿಲ್ಲ. ಆದ್ದರಿಂದ ರಾಯನ ಸೋಲು ಪ್ರತಾಪರುದ್ರನ ವಿಜಯವು ಕೇವಲ ಊಹೆಯೆ ಸರಿ.

6. ಅದೇ ಪುಟದಲ್ಲಿ: "ಏಕೆಂದರೆ ದೀರ್ಘಕಾಲದ ಸಂಘರ್ಷದ ಕೊನೆಯಲ್ಲಿ ರಾಯನ ಜೋಳಿಗೆ ಬರಿದಾಗಿಯೇ ಉಳಿಯಿತೆಂದು ಹೇಳಬೇಕಾಗುತ್ತದೆ."

- ರಾಯನೇ ರಾಯವಾಚಕದಲ್ಲಿ ಹೇಳುವಂತೆ (ರಾಯವಾಚಕ - ಅನು: ಗುರುಮೂರ್ತಿ ಪೆಂಡಕೂರು, ಪು:88) ಒರಿಸ್ಸಾ ದಂಡಯಾತ್ರೆಯು ಭೂಮಿಗೆಂದು ನಡೆದದ್ದಲ್ಲಾ. ಈ ದಂಡ ಯಾತ್ರೆಯಲ್ಲಿ ರಾಯನಿಗಾದ ಲಾಭಗಳನ್ನು ನಾನು ಲೇಖನ ಒಂದರಲ್ಲಿ ದೀರ್ಘವಾಗಿ ವಿವೇಚಿಸಿದ್ದೇನೆ. ರಾಯನಿಗೆ ಈ ಯುದ್ಧದಲ್ಲಿ ಗಜಪತಿಗೆ 90,000ಚ.ಕಿ.ಮೀ. ಭೂಮಿಯನ್ನು ಬಿಟ್ಟುಕೊಟ್ಟೂ ಇನ್ನೂ 70,000ಚ.ಕಿ.ಮೀ. ಭೂಮಿ ಉಳಿಯಿತು. ಇದೇನು ಸಣ್ಣ ಲಾಭವಲ್ಲ. ಇದರೊಂದಿಗೆ ಯುದ್ಧಗಳಲ್ಲಿ ಸೆರೆಸಿಕ್ಕ ಆನೆಗಳು, ಕುದುರೆಗಳು ಸಂಪತ್ತನ್ನು ಮತ್ತು ಈ ಹೆಚ್ಚುವರಿ ಭೂ ಭಾಗದಿಂದ ಬರುವಂತಹ ತೆರಿಗೆ ಮುಂತಾದ ವಾರ್ಷಿಕ ಆಧಾಯವನ್ನು ಗಮನಿಸಿದರೆ "ರಾಯನ ಜೋಳಿಗೆ ಬರಿದಾಗಿಯೇ ಉಳಿಯಿತು" ಎಂದು ಹೇಳುವುದು ಸರಿಯಲ್ಲ.

7. ಪುಟ-64ರಲ್ಲಿ: "...ಗಜಪತಿಯು ಬೆದರಿ ಕಾಡುಸೇರಿದ ಇತ್ಯಾದಿಯಾಗಿ ಎಷ್ಟೇ ಬಡಾಯಿಕೊಚ್ಚಿಕೊಂಡಿರಲಿ, ಗಜಪತಿಯ ಮೂಲಗಳು ಏನೆನ್ನುತ್ತವೆ ಎಂಬ ಕಾಳಜಿಯಿಲ್ಲದೆ..."

- ಗಜಪತಿಯ ಮೂಲಗಳು ಸೋಲನ್ನಲ್ಲದೆ ಈ ವಿಷಯದಲ್ಲಿ ಹೇಳಲು ಇನ್ನೇನು ಇಲ್ಲವಾದ್ದರಿಂದ ಈ ಮೂಲಗಳೆಲ್ಲವೂ ಮೌನವನ್ನೇ ವಹಿಸಿವೆ ಎಂದು ಹೇಳಬೇಕಾಗುತ್ತದೆ.

8. ಅದೇ ಪುಟದಲ್ಲಿ: "ಸೋಲನ್ನಪ್ಪಿದ ರಾಜರು ನೀಡುವಂತ ಯಾವ ಕಪ್ಪವನ್ನೂ ಅವನು (ಪ್ರತಾಪರುದ್ರ) ರಾಯನಿಗೆ ನೀಡಲಿಲ್ಲ... ವಿಜಯನಗರದ ಅರಸನಿಗೆ ಮಗಳನ್ನು ನೀಡಿ ವೈವಾಹಿಕ ಸಂಬಂಧ ಬೆಳೆಸಿಕೊಳ್ಳುವ ವರ್ಚಸ್ಸು ಅವನದಾಗಿತ್ತು."

- ಸೋತ ಪ್ರತಾಪರುದ್ರನು ಪೂರ್ವಭಾವಿ ಷರತ್ತು ಹಾಕುವ ಸ್ಥಿತಿಯಲ್ಲಿರಲಿಲ್ಲ. ಒಪ್ಪಂದದಲ್ಲಿ ಜಗನ್ಮೋಹಿನಿಯ ವಿವಾಹ ಮತ್ತು ಕೃಷ್ಣಾ ತಟದವರೆಗೂ ಭೂಮಿಯನ್ನು ಉಳಿಸಿಕೊಳ್ಳುವ ನಿರ್ಧಾರವನ್ನು ಬಿಟ್ಟರೆ ಕಪ್ಪದ ಸುದ್ದಿಯನ್ನೇ ಎತ್ತದಿದ್ದುದು (ಸಿಂಹಾಚಲದ 2ನೇ ಶಾಸನದಲ್ಲಿ ರಾಯನು ಕಳಿಂಗ ರಾಜ್ಯವನ್ನು "ಕಳಿಂಗ ದಂಡಪಾಟ" ಎಂದಿರುವುದನ್ನು ಗಮನಿಸಬೇಕು) ರಾಯನ ಔದಾರ್ಯಕ್ಕೆ ಸಾಕ್ಷಿಯಾಗಿದೆ. ಹೀಗಿರುವಾಗ ಕಪ್ಪದ ಪ್ರಶ್ನೆಯೇ ಬರುವುದಿಲ್ಲ ಮತ್ತು ಇತಿಹಾಸದಲ್ಲಿ ಸೋತರಾಜನು ಗೆದ್ದರಾಜನಿಗೆ ಮಗಳನ್ನು ಕೊಡಬೇಕಾಗಿ ಬರುವ ಉದಾಹರಣೆಗಳು ಹೇರಳವಾಗಿ ಸಿಗುತ್ತವೆಯೇ ಹೊರತು ನನ್ನ ಅಲ್ಪಮತಿಗೆ ವಿರುದ್ಧ ದಿಕ್ಕಿನ ಒಂದೇ ಒಂದು ಉದಾಹರಣೆಯೂ ಕಂಡುಬಂದಿಲ್ಲ.

ಈ ಮೇಲಿನ ಚರ್ಚೆಯಿಂದ ಪುಟ-64 "ಕೃಷ್ಣರಾಯರ ಮತ್ತು ಪ್ರತಾಪರುದ್ರ ಗಜಪತಿಯ ನಡುವಿನ ದೀರ್ಘ ಸಂಘರ್ಷದಲ್ಲಿ ಪ್ರತಾಪರುದ್ರ ಪ್ರತಾಪರುದ್ರನಾದ ಕೃಷ್ಣರಾಯನಿಗೆ ಸೋತು ಮರಳಿ ತನ್ನ ಪ್ರತಿದ್ವಂದ್ವಿಯ ಮೇಲಿನ ಸೇಡನ್ನು ಕಾವ್ಯ ಶಾಸನಗಳಲ್ಲಿ ಅವನನ್ನು ಹೀನಾಯಾನವಾಗಿ ಚಿತ್ರಿಸುವ ಮೂಲಕ ತೀರಿಸಿಕೊಂಡ" ಎನ್ನುವ ಹೇಳಿಕೆಯು ಹಾಸ್ಯಾಸ್ಪದವಾದೀತು.

* * *

# ಶತಮಾನದ ಕನ್ನಡ ಸಾಹಿತ್ಯ ಪರಿಷತ್ತು : ಅವಲೋಕನ ಲೇಖನದ ಪ್ರತಿಕ್ರಿಯೆ

–ವೇಮಗಲ್ ಸೋಮಶೇಖರ್
160, 4ನೇ ತಿರುವು, ಲಕ್ಷ್ಮೀಪುರ,
ಕೆಂಪೇಗೌಡನಗರ, ಬೆಂಗಳೂರು–18

ಕಳೆದ ಸಂಚಿಕೆಯಲ್ಲಿನ 'ಶತಮಾನದ ಕನ್ನಡ ಸಾಹಿತ್ಯ ಪರಿಷತ್ತು : ಅವಲೋಕನ' ಲೇಖನದಲ್ಲಿ '1915 ಮೇ 3 ರಂದು ಬೆಂಗಳೂರಿನ ಸರ್ಕಾರಿ ಪ್ರೌಢಶಾಲೆ (ಇಂದಿನ ಕೋಟೆ ಪ್ರೌಢಶಾಲೆ)ಯ ವಿಶಾಲ ಹಜಾರದಲ್ಲಿ ಆರಂಭಗೊಂಡ ಸಮ್ಮೇಳನ' ಮತ್ತು ಆ ಸಮ್ಮೇಳನ ನಡೆದದ್ದು 4 ದಿವಸ ಎಂದು ಲಕ್ಷ್ಮಣ್ ತೆಲಗಾವಿಯವರು ಬರೆದಿದ್ದಾರೆ.

ಆರಂಭಗೊಂಡ (ಪ್ರಥಮ) ಕನ್ನಡಿಗರ ಸಮ್ಮೇಳನ ನಡೆದದ್ದು ಇಂದಿನ ಕೋಟೆ ಪ್ರೌಢಶಾಲೆಯಲ್ಲಲ್ಲ. ಈಗಿನ ಕಲಾಕಾಲೇಜಿನಲ್ಲಿ. ನಡೆದದ್ದು 4 ದಿವಸಗಳಲ್ಲ, 3 ದಿವಸ. ಅಂದರೆ 1915ರ ಮೇ 3, 4, 5 ಸೋಮವಾರ, ಮಂಗಳವಾರ, ಬುಧವಾರದಂದು. ಆಗ ಈಗಿನ ಕಲಾಕಾಲೇಜು 'ಕೊಲಿಜಿಯೇಟ್ ಹೈಸ್ಕೂಲ್' ಆಗಿತ್ತು. ಆ ಕೋಲಿಜಿಯೇಟ್ ಹೈಸ್ಕೂಲೇ 'ಕೋಟೆ ಪ್ರೌಢಶಾಲೆ' ಎಂದು ತಪ್ಪಾಗಿ ಗ್ರಹಿಸಿದ ಲೇಖಕರೊಬ್ಬರು ಬಹಳ ದಿವಸಗಳ ಹಿಂದೆ ತಪ್ಪಾಗಿ ಬರೆದಿದ್ದರಿಂದ ನಂತರದಲ್ಲಿ ಅದನ್ನೇ ಎಲ್ಲಾ ಲೇಖಕರೂ ಅನುಕರಿಸಿದರು.

ನಾನು 2003ರಲ್ಲಿ *ಬೆಂಗಳೂರಿನಲ್ಲಿ* ಮಹಾತ್ಮಾಗಾಂಧಿ ಎಂದು ಕೃತಿ ರಚಿಸುತ್ತಿದ್ದಾಗ ಆಗಿನ ಪತ್ರಿಕೆಗಳಲ್ಲಿ 'ಗಾಂಧೀಜಿ ಕೊಲಿಜಿಯೇಟ್ ಹೈಸ್ಕೂಲಿನಲ್ಲಿ ದಿವಂಗತ ಗೋಖಲೆಯವರ ಭಾವಚಿತ್ರ ಅನಾವರಣ ಕಾರ್ಯಕ್ರಮವನ್ನು ನಡೆಸಿಕೊಟ್ಟರು' ಎಂದು ವರದಿ ಇದ್ದು; ಆ ಕೊಲಿಜಿಯೇಟ್ ಹೈಸ್ಕೂಲ್ ಯಾವುದು ಎಂದು ಹುಡುಕಿ ನೋಡಿದಾಗ ಈಗಿನ ಆರ್ಟ್ಸ್ ಕಾಲೇಜು (ಗ್ಯಾಸ್ ಕಾಲೇಜು) ಎಂದು ತಿಳಿಯಿತು. ಆಗ ಬಾಪೂಜಿ ಭಾಷಣ ಮಾಡಿದ ಜ್ಞಾಪಕಾರ್ಥವಾಗಿ ಆ ವಿಶಾಲವಾದ ಸಭಾಂಗಣಕ್ಕೆ 'ಬಾಪೂಜಿ ಸಭಾಂಗಣ' ಎಂದು ಹೆಸರಿಟ್ಟಿದ್ದು ಈಗಲೂ ಅದೇ ಹೆಸರಿದೆ.

ಪ್ರಥಮ ಕನ್ನಡ ಸಮ್ಮೇಳನ ನಡೆದ ಕೊನೆಯ ದಿವಸವಾದ 1915ರ ಮೇ 5 ರಂದು ಸಂಜೆ ನಡೆದ ಸಮಾರೋಪ ಸಮಾರಂಭದಲ್ಲಿ 'ಆಚೆ ನಾಳಿದ್ದು ಅಂದರೆ ದಿನಾಂಕ 8 ಶನಿವಾರದಂದು ಬೆಳಗ್ಗೆ ಗಾಂಧೀಜಿ ಇದೇ ಸ್ಥಳಕ್ಕೆ ಆಗಮಿಸಿ ಭಾಷಣ ಮಾಡಲಿದ್ದಾರೆ' ಎಂದು ವ್ಯವಸ್ಥಾಪಕರು ಪ್ರಚುರಪಡಿಸಿದರು. ಆ ಸಮ್ಮೇಳನಕ್ಕೆ ಆಗಮಿಸಿದ್ದ ಬಹಳಷ್ಟು ಜನರು ಗಾಂಧಿಯವರನ್ನು ಕಾಣಲು ಹಾಗೂ ಅವರ ಭಾಷಣ ಕೇಳಲು ನಗರದಲ್ಲಿಯೇ ಬೀಡುಬಿಟ್ಟರು.

ಕನ್ನಡ ಸಮ್ಮೇಳನದ ಆಹ್ವಾನ ಪತ್ರಿಕೆಗಳು ಇಂಗ್ಲಿಷ್ ಭಾಷೆಯಲ್ಲಿ ಅಚ್ಚಾಗಿದ್ದುವು ಎಂದು ವಾಚಕರೊಬ್ಬರು ಪತ್ರಿಕೆಗೆ ನೊಂದು ಬರೆದಿರುವ ಪತ್ರದಿಂದ ತಿಳಿದುಬರುತ್ತದೆ ಮತ್ತು ರಾ.ನಂ. ಚಂದ್ರಶೇಖರ್ ಅವರು 'ಬೆಂಗಳೂರು ದರ್ಶನ' ಸಂಪುಟ ಒಂದರಲ್ಲಿ 'ಕನ್ನಡ ಚಳುವಳಿ ನೆಲೆ–ಹಿನ್ನೆಲೆ' ಲೇಖನದ ಪುಟ 476ರಲ್ಲಿ 'ಆ ಸಮ್ಮೇಳನದ ಅಧ್ಯಕ್ಷರಾಗಿದ್ದ ಎಚ್.ವಿ. ನಂಜುಂಡಯ್ಯನವರ ಭಾಷಣ ಇಂಗ್ಲಿಷ್ ಭಾಷೆಯಲ್ಲಿತ್ತು' ಮುಂತಾಗಿ ಬರೆದಿದ್ದಾರೆ. ಪ್ರಥಮ ಸಮ್ಮೇಳನದ ಪೂರ್ತ ವರದಿ ಮತ್ತು ವಾಚಕರ ಪತ್ರವನ್ನು ಯಥಾವತ್ತಾಗಿ ನೀಡಲಾಗಿದೆ.

ಬೆಂಗಳೂರಲ್ಲಿ ಸೇರುವ ಕನ್ನಡಿಗರ ಸಂಮೇಳನಕ್ಕೆ ಸಂಬಂಧಪಟ್ಟ ಆಹ್ವಾನಪತ್ರಿಕೆ ಮೊದಲಾದುವುಗಳು ಇಂಗ್ಲೀಷಿನಲ್ಲಿ ಅಚ್ಚು ಮಾಡಿಸಿ ಕಳುಹಲ್ಪಟ್ಟಿವೆ. ಆಹ್ವಾನ ಮಾಡಲ್ಪಟ್ಟವರಲ್ಲಿ ಬರಿಯ ಕನ್ನಡವನ್ನು ಬಲ್ಲವರು ಅವನ್ನು ಓದಿಸಿಕೊಳ್ಳುವುದಕ್ಕಾಗಿ ಇಂಗ್ಲೀಷ್ ಪ್ಯಾಸ್ ಮಾಡಿದವರಲ್ಲಿಗೆ ಹೋಗಬೇಕಾಯಿತು. ಸಂಮೇಳನವನ್ನು ಕೂಡಿಸುವವರು ಕನ್ನಡಿಗರು, ಅಲ್ಲಿ ಸೇರುವವರು ಕನ್ನಡಿಗರು, ಅಲ್ಲಿ ಪಡೆವ ಲಾಭವು ಕನ್ನಡದ ಏಳ್ಗೆಯಾಗಿರುವಾಗ ಇಂಗ್ಲೀಷಿನ ಮಧ್ಯಸ್ತಿಕೆ ಯಾತಕ್ಕೆ ? ಇದು ಪ್ರಥಮ ಕಬಳದಲ್ಲೇ ಮಕ್ಷಿಕಾಪಾತವಾದಂತಲ್ಲವೆ ? ಇದು ಸ್ವಭಾಷಾಭಿಮಾನದ ಲಕ್ಷಣವೆ ? ಇಂಥ ಪರಭಾಷಾಪ್ರೇಮದಿಂದಲೇ ಅಲ್ಲವೆ ನಮ್ಮ ಸ್ವಭಾಷಾಮಾತೆಯು ಮೂಲೆಮಟ್ಟಾಗಿರುವುದು ? ಆ ಹೀನಸ್ಥಿತಿಯನ್ನು ನಿವಾರಣೆಮಾಡುವ ಪ್ರಯತ್ನದಲ್ಲೂ ಇಂಥ ನಡೆಯಾದರೆ ಮುಂದಣ ಸಭೆಯ ಕೆಲಸವೂ, ಅದರ ಚರಿತಾರ್ಥವೂ, ಎಷ್ಟುಮಟ್ಟಿಗೆ ನಮ್ಮ ಭಾಷೆಗೆ ಹಿತವನ್ನು ಮಾಡುವುವೋ ನೋಡಬೇಕೆಂದು ನಮ್ಮ ಪತ್ರವ್ಯವಹಾರಕರೊಬ್ಬರು ಬರೆದಿರುತ್ತಾರೆ.

**ಮೈಸೂರು ಸ್ಟಾರ್ 1915ನೆಯ ಇಸವಿ ಮೇ ತಾರೀಖು 2ನೇ ಭಾನುವಾರ, ಪುಟ 5, ವಾಚಕರ ಪತ್ರ**

**ಮೈಸೂರು ಸ್ಟಾರ್ 1915ನೆಯ ಇಸವಿ ಮೇ ತಾರೀಖು 9ನೇ ಭಾನುವಾರ, ಪುಟ 5**

### ಕನ್ನಡಿಗರ ಸಮ್ಮೇಳನ.

ಕನ್ನಡಿಗರ ಸಮ್ಮೇಳನವು ಕಳೆದ ತಾ|| ೩ ರಲ್ಲಿ ಬೆಂಗಳೂರ ಸರ್ಕಾರಿಯ ಹೈಸ್ಕೂಲ್ ಕಟ್ಟಡದಲ್ಲಿ ೧ನೆಯ ಕೌನ್ಸಿಲರ್ ಮ|| ಎಚ್. ವಿ. ನಂಜುಂಡಯ್ಯನವರಧ್ಯಕ್ಷತೆಯಲ್ಲಿ ಆರಂಭಿಸಲ್ಪಟ್ಟಿತು. ಧಾರವಾಡ, ಮದ್ರಾಸು, ಉಡುಪಿ ಮೊದಲಾದ ಕಡೆಗಳಿಂದ ಭಾಷಾಭಿಮಾನಿಗಳಾದವರು ಪ್ರತಿನಿಧಿಗಳಾಗಿ ಕರೆಯಲ್ಪಟ್ಟು ಬಂದಿದ್ದರಲ್ಲದೆ ಪ್ರೇಕ್ಷಕರ ಸಂಖ್ಯೆಯೂ ಹೆಚ್ಚಾಗಿ ಸೇರಿದ್ದಿತು. ಶ್ರೀಮದ್ಯುವರಾಜರು, ದಿವಾನರು ಮೊದಲಾದವರು ತಂತಿಯ ಮೂಲಕ ತಮ್ಮಭಿನಂದನಗಳನ್ನು ಕಳುಹಿದ್ದರು. ಅಧ್ಯಕ್ಷರು ಕನ್ನಡಭಾಷೆಯುತ್ಪತ್ತಿ, ಪೂರ್ವದಲ್ಲಿ ಅದಕ್ಕಿದ್ದ ಔದ್ಧತೆ, ಮತ್ತು ಉಚ್ಛ್ರಾಯಸ್ಥಿತಿ ಈಗ ಅದಕ್ಕೂ ತೆಲುಗು ತಮಿಳು ಮೊದಲಾದ ದ್ರಾವಿಡಭಾಷೆಗಳಿಗೂ ಇರತಕ್ಕ ವ್ಯತ್ಯಾಸ–ಇವುಗಳನ್ನು ವಿವರಿಸುವ ಮತ್ತು ಮುಂದೆ ಅದು ಕರ್ನಾಟಕಪ್ರಾಂತಗಳಲ್ಲೆಲ್ಲಾ ಏಕಸ್ವರೂಪವನ್ನು ಹೊಂದಿ ಸೋದರಭಾಷೆಗಳಂತೆ ಉಚ್ಛ್ರಸ್ಥಿತಿಗೆ ಬರುವ ಉಪಾಯ ಮೊದಲಾದಂಶಗಳನ್ನೊಳಗೊಂಡ ಒಂದು ದೊಡ್ಡ ಭಾಷಣವನ್ನು ಮಾಡಿದರು. ಅನಂತರ ವಿಷಯನಿರ್ಧಾರಕಸಭೆಯು ಏರ್ಪಡಿಸಲ್ಪಟ್ಟು ಆ ದಿವಸದ ಸಭೆಯು ವಿಸರ್ಜಿತವಾಯಿತು. ವಿಷಯನಿರ್ಧಾರಕಸಭೆಯವರು ತಾ|| ೪ ರಲ್ಲಿ ದಿ|| ಬ|| ಕೆ. ಪಿ. ಪುಟ್ಟಣ್ಣಸೆಟ್ಟರ ಅಧ್ಯಕ್ಷತೆಯಲ್ಲೂ ತಾ|| ೫ ರಲ್ಲಿ ಚೀಫ್ ಇಂಜನಿಯರ್ ಮ|| ಕರ್ಪೂರಶ್ರೀನಿವಾಸರಾಯರ ಅಧ್ಯಕ್ಷತೆಯಲ್ಲೂ ಸಭೆಸೇರಿದ್ದು, ಮೈಸೂರಪ್ರಾಂತಕ್ಕೆ ೧೨, ಬೊಂಬಾಯಾಧಿಪತ್ಯಕ್ಕೆ ೮, ಹೈದರಾಬಾದಿಗೆ ೨, ದಕ್ಷಿಣಮಹಾರಾಷ್ಟ್ರಕ್ಕೆ ೨ ಮತ್ತು ಕೊಡಗಿಗೆ ೧ ಈ ಪ್ರಕಾರ ೩೦ ಸಭ್ಯರನ್ನೊಳಗೊಂಡ ೧ ಕಾರ್ಯಕಾರಿಮಂಡಳಿಯು ಸ್ಥಾಪಿತವಾಗಿ, ಒಬ್ಬರು ಅಧ್ಯಕ್ಷರು, ಒಬ್ಬರು ಉಪಾಧ್ಯಕ್ಷರು, ಒಬ್ಬರು ಸೆಕ್ರೆಟರಿ, ಮತ್ತೊಬ್ಬರು ಆಡಿಟರು ಹೀಗೆ ಅಧಿಕಾರಿಗಳು ನಿಯಮಿಸಲ್ಪಡಬೇಕೆಂದೂ; ಪ್ರಾಚೀನ ಕರ್ನಾಟಕಗ್ರಂಥಗಳು ಶೇಖರಿಸಲ್ಪಟ್ಟು ವ್ಯಾಖ್ಯಾನದೊಡನೆ ಪ್ರಚುರಪಡಿಸಲ್ಪಡಬೇಕು, ಗ್ರಂಥಶೋಧನೆಗೆ ಉತ್ತೇಜನವೂ, ಗ್ರಂಥಕರ್ತರಿಗೆ ಪ್ರೋತ್ಸಾಹವೂ ಕೊಡಲ್ಪಡಬೇಕು, ವೃತ್ತಪತ್ರಿಕೆಗಳೂ ಮಾಸಪುಸ್ತಕಗಳೂ ಪ್ರಕಟಿಸಲ್ಪಡಬೇಕು ಎಂದೂ; ೧೦೦೦ ರೂ. ಗಳನ್ನು ಕೊಡತಕ್ಕವರು ಪೋಷಕರಾಗಿಯೂ, ೫೦೦ ರೂ. ಗಳನ್ನು ಕೊಡತಕ್ಕವರು ಆಶ್ರಯದಾತರಾಗಿಯೂ, ೧೦೦ ರೂ. ಗಳನ್ನು ಕೊಡತಕ್ಕವರು ಆಜೀವಸಭಾಸದರಾಗಿಯೂ ಮಾಡಲ್ಪಡತಕ್ಕದೆಂದೂ; ಪ್ರತಿವರ್ಷದಲ್ಲೂ ೧೨ ರೂ. ಗಳನ್ನು ಕೊಡುವವರು ೧ ನೆಯ ತರಗತಿಯ ಸಭ್ಯರಾಗಿಯೂ, ೪ ರೂ. ಗಳನ್ನು ಕೊಡುವವರು ೨ ನೆಯ ತ|| ಸಭ್ಯರಾಗಿಯೂ ಇರತಕ್ಕದೆಂದೂ; ಒಂದು ಕಾರ್ಯಕಾರಿ ಮಂಡಳಿಯು ಏರ್ಪಾಟಾಗತಕ್ಕದೆಂದೂ ನಿರ್ಧಾರಗಳಾಗಿ, ಮ|| ಗಳಾದ ಎಚ್. ವಿ. ನಂಜುಂಡಯ್ಯನವರು ಅಧ್ಯಕ್ಷರಾಗಿಯೂ, ಎಂ. ಶ್ಯಾಮರಾಯರು ಉಪಾಧ್ಯಕ್ಷರಾಗಿಯೂ, ಸರದಾರ್ ಎಂ. ಕಾಂತರಾಜಅರಸಿನವರು, ಎಂ. ವೆಂಕಟಕೃಷ್ಣಯ್ಯನವರು, ಕರ್ಪೂರ ಶ್ರೀನಿವಾಸರಾಯರು, ಆರ್. ಎ. ನರಸಿಂಹಾಚಾರ್ಯರು, ಡಾ|| ಅಚ್ಯುತರಾಯರು, ಆರ್. ರಘುನಾಥರಾಯರು, ಬಾಪು ಸುಬ್ಬರಾಯರು, ಅಯ್ಯಾಶಾಸ್ತ್ರಿಗಳು, ಕರಿಬಸವಶಾಸ್ತ್ರಿಗಳು, ಕೆ. ಪಿ. ಪುಟ್ಟಣ್ಣಸೆಟ್ಟರು, ಸಿ. ಕೃಷ್ಣರಾಯರು, ಸಿ. ವಾಸುದೇವಯ್ಯನವರು, ಎಂ. ಎಸ್. ಪುಟ್ಟಣ್ಣನವರು, ಬಿ. ಎಂ. ಶ್ರೀಕಂಠಯ್ಯನವರು, ಬಿ. ಕೃಷ್ಣಪ್ಪನವರು ಮೈಸೂರಸೀಮೆಯ ಪರವಾಗಿಯೂ; ಧಾರವಾಡದ ಟ್ರೇನಿಂಗ್ ಕಾಲೇಜಿನ ಮುಖ್ಯೋಪಾಧ್ಯಾಯರಾದ ಬಿ. ಬಿ. ಜೋಷಿಯವರು, ಪಬ್ಲಿಕ್ ಪ್ರಾಸಿಕ್ಯೂಟರಾದ ಎಕ್. ಜಿ. ಕರಿಗುದರಿಯವರು, ಆರ್. ಎ. ಜಹಗೀರ್ದಾರ್‌ರವರು, ನರಗುಂದಕರ್‌ರವರು, ಪಿ. ಆರ್. ಚಿಕ್ಕೋಡಿಯವರು, ಮುದವೇಡಕರ್‌ರವರು, ಎಫ್. ಜಿ. ಹಳಕಟ್ಟಿಯವರು, ಎ. ಬಿ. ಆಲೂರ್‌ರವರು ಮತ್ತು ವಿ. ಎಕ್. ಮಗ್ದಾಳ್‌ರವರು ಬೊಂಬಾಯಾಧಿಪತ್ಯದ ಪರವಾಗಿಯೂ, ಬೆನಗಲ್ ರಾಮರಾಯರು, ರಾಜಗೋಪಾಲಕೃಷ್ಣರಾಯರು, ಮತ್ತು ಎ. ವೆಂಕಟರಾಯರು ಮದ್ರಾಸಾಧಿಪತ್ಯದ ಪರವಾಗಿಯೂ ಮೆಂಬರುಗಳಾಗಿ ನಿಯಮಿಸಲ್ಪಟ್ಟರು. ಕನ್ನಡಭಾಷೆಯುನ್ನಾಡತಕ್ಕ ಪ್ರದೇಶಗಳಲ್ಲೆಲ್ಲಾ ಭಾಷೆಯು ಏಕರೂಪವಾಗಬೇಕಲ್ಲದೆ, ಆ ಪ್ರದೇಶಗಳಲ್ಲಿಯ ಬಾಲ್ಯವಿದ್ಯಾಭ್ಯಾಸವು ಕನ್ನಡದಲ್ಲೇ ಜರುಗುವಂತೆ ಮಾಡಲು ಆಯಾಸರ್ಕಾರದವರನ್ನು ಪ್ರಾರ್ಥಿಸಬೇಕು; ಇದೇ ವಿಚಾರದಲ್ಲಿ ಮದ್ರಾಸು ಮತ್ತು ಬೊಂಬಾಯಿ ಸರ್ವಕಲಾಶಾಲೆಯವರನ್ನು ಪ್ರಾರ್ಥಿಸಬೇಕಲ್ಲದೆ, ಮದರ್‍ರಾಸು, ಬೊಂಬಾಯಿ, ಹೈದರಾಬಾದು, ದಕ್ಷಿಣಮಹಾರಾಷ್ಟ್ರ, ದೇಶೀಯ ಸಂಸ್ಥಾನಗಳು ಇವುಗಳ ಕೋರ್ಟುಭಾಷೆಯೂ ಕನ್ನಡವಾಗಿರುವಂತೆ ಆಯಾಸರ್ಕಾರದವರನ್ನೂ, ಕನ್ನಡವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸುವಂತೆ ಇಂಡ್ಯಾ ಸರ್ಕಾರದವರನ್ನೂ ಪ್ರಾರ್ಥಿಸಿಕೊಳ್ಳಬೇಕೆಂದು ಅಧ್ಯಕ್ಷರು ಸೂಚಿಸಿದಮೇಲೆ ಕೆಲ ಮಂಗಳಪದ್ಯಗಳು ಹೇಳಲ್ಪಟ್ಟು ಸಮ್ಮೇಳನಕಾರ್ಯವು ಪರಿಸಮಾಪ್ತಿಗೊಳಿಸಲ್ಪಟ್ಟಿತು.

## ಪ್ರಕಟಣೆ

# ಇತಿಹಾಸ ಸಂಶೋಧನಾ ತರಬೇತಿ ಶಿಬಿರ

ಇಂದಿನ ಸಂಶೋಧನಾರ್ಥಿಗಳಲ್ಲಿ ಇತಿಹಾಸ ಸಂಶೋಧನೆ ಎಂದರೆ ಕಾಲಿಂಗ್‌ವುಡ್ ಹೇಳುವ 'ಕತ್ತರಿ ಮತ್ತು ಅಂಟು ಪ್ರಯೋಗ'ವಾಗಿದೆ. ಇದರಿಂದ ಕೃತಿಚೌರ್ಯ ಹೆಚ್ಚಿ, ನಿಜವಾದ ಸಂಶೋಧನೆ ಎಂಬುದೇ ಕಣ್ಮರೆಯಾಗುತ್ತಿದೆ. ಇತಿಹಾಸ ಸಂಶೋಧನೆಯ ಗುಣಮಟ್ಟವು ದಿನೇದಿನೆ ಕುಸಿಯುತ್ತಿದೆ. ಕಾರಣ, ನಮ್ಮ ಸಂಶೋಧನಾರ್ಥಿಗಳಿಗೆ ಸಂಶೋಧನೆ ಎಂದರೇನು? ಅದಕ್ಕೆ ಅನುಸರಿಸಬೇಕಾದ ಕ್ರಮಗಳೇನು? ಕೈಗೊಳ್ಳಬೇಕಾದ ವಿಧಾನಗಳೇನು? ವಿಮರ್ಶಿಸಬೇಕಾದ ಮಾರ್ಗಗಳಾವುವು? ಒಟ್ಟು ಉತ್ಪನ್ನವನ್ನು ಸೈದ್ಧಾಂತಿಕ ಚೌಕಟ್ಟಿಗೆ ಒಳಪಡಿಸುವುದೇಗೆ? ಇವೇ ಮೊದಲಾದ ಮೂಲಭೂತ ವಿಚಾರಗಳನ್ನು ಕುರಿತಾದ ಸಮರ್ಪಕ ಜ್ಞಾನ, ತಿಳುವಳಿಕೆ ಹಾಗೂ ಅನ್ವಯಿಕತೆಯ ಕೊರತೆ ಇದೆ. ಈ ಕೊರತೆಯು ವಿಶ್ವವಿದ್ಯಾಲಯಗಳ ಅಧ್ಯಾಪಕರು ಮತ್ತು ಮಾರ್ಗದರ್ಶಕರ ಬಗೆಗೂ ಸಂಶಯ ಮೂಡಿಸುತ್ತದೆ ಎಂದರೆ ತಪ್ಪಾಗದು.

ಈ ಕೊರತೆಯನ್ನೆಲ್ಲ ನೀಗಿಸಿ, ಸುಧಾರಿಸಿ ಬಿಡುತ್ತೇವೆಂಬ ಹುಚ್ಚು ಉತ್ಸಾಹವಾಗಲಿ, ಭ್ರಮೆಯಾಗಲಿ *ಇತಿಹಾಸ ದರ್ಪಣ* ಬಳಗಕ್ಕಿಲ್ಲವಾದರೂ, ಈ ಹಿನ್ನೆಲೆಯಲ್ಲಿ ಒಂದು ಪುಟ್ಟ ಹೆಜ್ಜೆಯನ್ನಿಡಲು ಮುಂದಾಗಿದೆ. ನಾಡಿನ ವಿವಿಧ ಭಾಗಗಳಿಂದ ಚರಿತ್ರಾಸಕ್ತ, ಪ್ರತಿಭಾವಂತ ಸಂಶೋಧನಾರ್ಥಿಗಳನ್ನು ಆಯ್ದು, ನಾಡಿನ ಪ್ರಸಿದ್ಧ ಇತಿಹಾಸಕಾರರು ಹಾಗೂ ಸಂಶೋಧಕರನ್ನು ಆಹ್ವಾನಿಸಿ ಮೂರುದಿನಗಳ ಕಾಲ ಒಂದೇ ಸೂರಿನಡಿ ನೆಲೆಗೊಳಿಸಿ, ಅರ್ಥಪೂರ್ಣ ತರಬೇತಿ ಶಿಬಿರವನ್ನು ಏರ್ಪಡಿಸುವ ಉದ್ದೇಶವನ್ನು ಹೊಂದಿದೆ. ಇದರ ಸ್ವರೂಪ ಹೀಗಿದೆ:

* ಶಿಬಿರಕ್ಕೆ ನಾಡಿನ ಹತ್ತು ಮಂದಿ ಪ್ರಸಿದ್ಧ ಇತಿಹಾಸ ಸಂಶೋಧಕರು/ವಿದ್ವಾಂಸರನ್ನು ಆಹ್ವಾನಿಸುವ ಉದ್ದೇಶವಿದೆ. ಇವರುಗಳ ಒಂದೊಂದು ಪ್ರಮುಖ ಸಂಶೋಧನಾ ಪ್ರಬಂಧಗಳನ್ನು ಸಂಗ್ರಹಿಸಿ, ಶಿಬಿರಾರ್ಥಿಗಳಿಗೂ ಮತ್ತು ಆಹ್ವಾನಿತ ವಿದ್ವಾಂಸರಿಗೂ ಒಂದು ತಿಂಗಳು ಮೊದಲೇ ಇ-ಮೇಲ್ ಮೂಲಕ ಕಳುಹಿಸಿಕೊಡಲಾಗುವುದು.
* ಈ ಪ್ರಬಂಧಗಳನ್ನು ಅಧ್ಯಯನ ನಡೆಸಿ, ಎಲ್ಲರೂ ಕಡ್ಡಾಯವಾಗಿ ಟಿಪ್ಪಣಿಗಳನ್ನು ಸಿದ್ಧಪಡಿಸಿಕೊಂಡು ಬರುವುದು.
* ಮೂರು ದಿನಗಳ ಕಾಲ ನಡೆಯುವ ಶಿಬಿರದಲ್ಲಿ ಪ್ರತೀದಿನ ಮೂರು/ನಾಲ್ಕು ಪ್ರಬಂಧಗಳ ಮಂಡನೆ ಇರುತ್ತದೆ. ಪ್ರತೀ ಪ್ರಬಂಧದ ಮಂಡನೆ ನಂತರ ಅವುಗಳನ್ನು ಚರ್ಚೆ ಹಾಗೂ ವಿಮರ್ಶೆಗಳಿಗೆ ಒಳಪಡಿಸುವುದು. ಇಲ್ಲಿ ವಿದ್ವಾಂಸರೊಂದಿಗೆ ಸಂಶೋಧನಾರ್ಥಿಗಳು ಕೂಡ ಭಾಗವಹಿಸಲು ಅವಕಾಶ ಕಲ್ಪಿಸಲಾಗುವುದು.

* ಸಂಶೋಧನಾರ್ಥಿಗಳು ಇತಿಹಾಸ ಸಂಶೋಧನೆಯ ಬಗೆಗಿನ ತಮ್ಮ ಅನುಮಾನ, ಗೊಂದಲ, ಆಲೋಚನೆ ಮೊದಲಾದವುಗಳನ್ನು ತಜ್ಞರಿಂದ ಪರಿಹರಿಸಿಕೊಳ್ಳಲು ಅಥವಾ ಅವರಲ್ಲಿ ಹಂಚಿಕೊಳ್ಳಲು ಸಾಕಷ್ಟು ಸಮಯಾವಕಾಶವಿರುತ್ತದೆ.
* ಊಟ, ತಿಂಡಿ ಮತ್ತು ವಾಸ್ತವ್ಯದ ವ್ಯವಸ್ಥೆಯನ್ನು ಎಲ್ಲರಿಗೂ ಒಂದೇ ಕಡೆ ಮಾಡಲಾಗುವುದು.
* ಶಿಬಿರವನ್ನು ಕುಪ್ಪಳ್ಳಿ ಅಥವಾ ಕೊಡಗಿನಲ್ಲಿ 2015ರ ಏಪ್ರಿಲ್ ಕೊನೆಯ ಭಾಗ ಅಥವಾ ಮೇ ತಿಂಗಳ ಮೊದಲ ಭಾಗದಲ್ಲಿ ಆಯೋಜಿಸುವ ಉದ್ದೇಶವಿದೆ.
* ಸಂಶೋಧನಾರ್ಥಿಗಳು ಸಾಮಾನ್ಯ ಶುಲ್ಕವನ್ನು ಪಾವತಿಸಬೇಕಾಗಿರುತ್ತದೆ ಹಾಗೂ ಶಿಬಿರದ ಸ್ಥಳಕ್ಕೆ ಬಂಧು ಹೋಗುವ ಖರ್ಚುವೆಚ್ಚಗಳೆಲ್ಲ ಅವರದೇ ಆಗಿರುತ್ತದೆ.

ಕೆಲವು ಇತಿಹಾಸ ಆಸಕ್ತರಲ್ಲಾದರೂ ಸಂಶೋಧನೆಯ ಮನೋಭಾವವನ್ನು ಬಿತ್ತಿ 'ಸಂಶೋಧನಾ ಸಂಸ್ಕೃತಿ'ಯನ್ನು ಬೆಳೆಸುವ ಗುರಿ ಮತ್ತು ಆಶಯವನ್ನು ಈ ಶಿಬಿರ ಹೊಂದಿದೆ. ಈ ರೀತಿಯ ಶಿಬಿರಗಳನ್ನು ಪ್ರತೀವರ್ಷ ಹಮ್ಮಿಕೊಳ್ಳುವ ಉದ್ದೇಶ ಇತಿಹಾಸ ದರ್ಪಣ ಬಳಗಕ್ಕಿದೆ.

**ಸಂಶೋಧನಾರ್ಥಿಗಳ ಆಯ್ಕೆ ವಿಧಾನ:**

* ಈ ಶಿಬಿರದಲ್ಲಿ ಪಾಲ್ಗೊಳ್ಳುವ ಆಸಕ್ತಿಯುಳ್ಳವರು ಇತಿಹಾಸದ ವಿಷಯವಾಗಿ ತಾವು ಬರೆದಿರುವ ಯಾವುದಾದರೂ ಬರವಣಿಗೆಯನ್ನು (ಸಾವಿರ ಪದಗಳ ಮಿತಿಯಲ್ಲಿರಲಿ) ಇ–ಮೇಲ್ ಮೂಲಕ ನಮಗೆ **2015ರ ಫೆಬ್ರವರಿ 10ರೊಳಗೆ** ಕಳುಹಿಸಿಕೊಡಬೇಕು.
* ಬರವಣಿಗೆಯನ್ನು ಮಾನದಂಡವಾಗಿ ಪರಿಗಣಿಸಿ ಶಿಬಿರಾರ್ಥಿಗಳನ್ನು ಆಯ್ಕೆ ಮಾಡಲಾಗುವುದು.
* ಆಯ್ಕೆಯಾದವರಿಗೆ ಇತಿಹಾಸ ದರ್ಪಣ ಬಳಗವೇ ಸಂಪರ್ಕಿಸಿ ವಿಷಯ ತಿಳಿಸುವುದು.
* ಬರವಣಿಗೆಯನ್ನು 'itihasadarpana@gmail.com'ಗೆ ಇ–ಮೇಲ್ ಮಾಡಬೇಕು. ಹೆಚ್ಚಿನ ಮಾಹಿತಿಗಾಗಿ ಸಂಜೆ 4 ರಿಂದ 8 ಗಂಟೆಯ ನಡುವೆ ಸಂಪರ್ಕಿಸಿ: 9632245228.

**–ಸಂಪಾದಕರು**

